ಜನವರಿ, ೧೯೬೩



# ಸಿದ್ಧಗಂಗಾ



## ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ರಥೋತ್ಸವಾಹ್ವಾನ ಪತ್ರಿಕಾ

ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳು

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ೧೯೦೪ ಕ್ಕೆ ಸರಿಯಾದ ಶ್ರೀದುಂದುಭಿ ನಾಮಸಂವತ್ಸರದ

ಮಾಘ ಬಹುಳ ೫ ಬುಧವಾರ 2-2-83 ಸ್ವಸ್ತಿವಾಚನಾದಿಗಳು ಮತ್ತು
ಧ್ವಜಾರೋಹಣಾದಿ ಕಾರ್ಯಗಳು

,, ,, ೬ ಗುರುವಾರ 3-2-83 ವೃಷಭವಾಹನ ಮತ್ತು ಸಿಂಹವಾಹನ

,, ,, ೭ ಶುಕ್ರವಾರ 4-2-83 ಗಜವಾಹನ ಮತ್ತು ಹುಲಿವಾಹನ

,, ,, ೮ ಶನಿವಾರ 5-2-83 ರುದ್ರಾಕ್ಷಿ ಮಂಟಪೋತ್ಸವ, ಅಶ್ವವಾಹನ

,, ,, ೯ ಭಾನುವಾರ 6-2-83 ಮುತ್ತಿನಪಾಲಕಿ ಉತ್ಸವ ಮತ್ತು
ನವರಂಗ ಪಾಲಕಿ ಉತ್ಸವ

,, ,, ೧೦ ಸೋಮವಾರ 7-2-83 **ಬೆಳ್ಳಿ ಪಾಲಕಿ ಉತ್ಸವ**

,, ,, ೧೧ ಮಂಗಳವಾರ 8-2-83 ಮುತ್ತಿನಪಾಲಕಿ ಉತ್ಸವ

,, ,, ೧೨ ಬುಧವಾರ 9-2-83 ಬಿಲ್ವವೃಕ್ಷವಾಹನ ಮತ್ತು ನವಿಲುವಾಹನ

,, ,, ೧೩ ಗುರುವಾರ 10-2-83 ರಾವಣವಾಹನ ಮತ್ತು ನಂದಿವಾಹನ

,, ,, ೧೪ ಶುಕ್ರವಾರ 11-2-83 ಮಹಾಶಿವರಾತ್ರಿ ಪೂಜಾದಿಗಳು,
ಶೇಷವಾಹನ ಮತ್ತು ಹುತ್ತದವಾಹನ

,, ● ೩೦ ಶನಿವಾರ 12-2-83 **ರಥೋತ್ಸವ ಮತ್ತು ತೆಪ್ಪೋತ್ಸವ**

ಫಾಲ್ಗುಣ ಶುದ್ಧ ೧ ಭಾನುವಾರ 13-2-83 ಪಂಚಬ್ರಹ್ಮೋತ್ಸವ

ಮತ್ತು ಮಾಮೂಲಿನಂತೆ ಎತ್ತಿನಪರಿಷೆಯೂ, **8.2.83**ನೇ ಮಂಗಳವಾರ 'ದನಗಳ ಪ್ರದರ್ಶನವೂ' ಉತ್ತಮರಾಸುಗಳಿಗೆ ಬಹುಮಾನ ವಿನಿಯೋಗವೂ ನಡೆಯುವಂತೆ ಏರ್ಪಡಿಸಿದೆ. 'ವ್ಯವಸಾಯ ಮತ್ತು ಕೈಗಾರಿಕಾ ವಸ್ತು ಪ್ರದರ್ಶನವೂ' ಮತ್ತು ಪ್ರತಿ ದಿವಸ ಸಾಯಂಕಾಲ ಸಾಂಸ್ಕೃತಿಕ ಚಟುವಟಿಕೆಗಳು ನಡೆಯುವಂತೆ ಏರ್ಪಾಟು ಮಾಡಲಾಗಿದೆ.

ಸರ್ವರೂ ಸಕಾಲದಲ್ಲಿ ಬಂದು ಉತ್ಸವಗಳಲ್ಲಿ ಭಾಗವಹಿಸಿ, ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಕೃಪೆಗೆ ಪಾತ್ರರಾಗಬೇಕಾಗಿ ಅಪೇಕ್ಷಿಸುತ್ತೇವೆ.

ಶ್ರೀ ಸಿದ್ಧಗಂಗಾ ಕ್ಷೇತ್ರ.
ತುಮಕೂರು ಜಿಲ್ಲೆ.
ತಾ|| 15-1.83

ಶ್ರೀ ಶ್ರೀ ಸ್ವಾಮಿಗಳು

# ಸಿದ್ಧಗಂಗಾ

ಸಂಪುಟ-೧೯ ಸಂಚಿಕೆ-೧ ಜನವರಿ, ೧೯೮೩

ಭವಾಂಬೋಧಿನಾವಂ ಸದಾಶುದ್ಧಭಾವಂ
ಶಿವಂ ಶಾಂತಮೇಕಂ ಪರಿತ್ರಾತಲೋಕಂ ।
ಶಿವಾನಂದಲಿಂಗಂ ಶಿವಾದ್ವೈತಲಿಂಗಂ
ಪರಬ್ರಹ್ಮ ಲಿಂಗಂ ಭಜೇಸಿದ್ಧಲಿಂಗಂ ॥



ತೀವಿಕೊಳ್ಳಿರ್ದ ಸಭೆಯಲ್ಲಿ
ಈಯಬಲ್ಲರೆ ಎಲ್ಲರೂ ದಾನವ ?
ಸಾವರೇ ಸಂಗ್ರಾಮಕ್ಕೆ
ಹೋದ ಯೋಧರೆಲ್ಲ ?
ಇರಿಯಬಲ್ಲರೇ ನೂರಕ್ಕೊಬ್ಬ
ಅರಿಯಬಲ್ಲರೇ ಸಹಸ್ರಕ್ಕೊಬ್ಬ
ಹುಣಿಸೆಯ ಹೂವೆಲ್ಲ
ಕಾಯಾಗಬಲ್ಲುದೇ ರಾಮನಾಥಾ ?

—ದೇವರದಾಸಿಮಯ್ಯ

# ಈ ಸಂಚಿಕೆಯಲ್ಲಿ





# ಶ್ರೀವಾಣಿ

"ತನ್ನ ಬಣ್ಣಿಸಬೇಡ............"

ಇದೊಂದು ಸರಳ, ಸುಂದರ ತತ್ತ್ವ. ಈ ತತ್ತ್ವ ಬಸವ ನುಡಿಯ ವೈಶಿಷ್ಟ್ಯ. ಆತ್ಮ ಪ್ರಶಂಸೆ, ವ್ಯಕ್ತಿಯ ವ್ಯಕ್ತಿತ್ವ ವಿಕಾಸದ ಹಾದಿಯಲ್ಲಿ ಒಂದು ಮಹಾ ಕಂಟಕ. ಆತ್ಮ ಪ್ರಶಂಸೆಗೆ ಒಳಗಾದ ವ್ಯಕ್ತಿ ತನ್ನ ಧ್ಯೇಯ ಧೋರಣೆಗಳನ್ನು ಸರಿಯಾಗಿ ಪಾಲಿಸಲಾರ. ಆದ್ದರಿಂದ ತನ್ನನ್ನು ತಾನೇ ಹೊಗಳಿಕೊಳ್ಳಬಾರದು. ಅಂತೆಯೇ ಇತರರ ಹೊಗಳಿಕೆಗೂ ಬಾಯಬಿಡಬಾರದು. ಲೋಕದಲ್ಲಿ ಇಂದು ಕೆಲವರಂತೂ ಹೊಗಳಿದರೆ ಸಾಕು ಉಬ್ಬಿ ಹೋಗುತ್ತಾರೆ. ಮತ್ತೆ ಕೆಲವರಿಗದು ಸ್ವಕಾರ್ಯಸಾಧನೆಯ ಮಾಧ್ಯಮವಾಗಿದೆ. ಆದರೆ ನಮ್ಮ ಶರಣರು ಸದಾ ಜಾಗೃತರಾಗಿ ಹೊಗಳಿಕೆಯನ್ನು ಹೊದ್ದವರಾಗಿದ್ದರು. ಅವರಿಗೆ ಆತ್ಮ ಪ್ರಶಂಸೆಗಿಂತಲೂ ಆತ್ಮ ನಿರೀಕ್ಷೆ–ಪರೀಕ್ಷೆಗಳು ಮುಖ್ಯವಾಗಿದ್ದುವು. ಆ ಹೊಗಳಿಕೆಯನ್ನು ಹೊನ್ನಶೂಲವೆಂದು ಭಾವಿಸಿದ್ದರು. ಇದನ್ನು ಬಸವಣ್ಣನವರು " ಹೊಗಳಿದವರೆನ್ನ ಹೊನ್ನ ಶೂಲದಲಿಕ್ಕಿದರೆಂಬೆ " ಎಂದಿದ್ದಾರೆ.

"ಸಿದ್ಧಗಂಗಾ" ಮಾಸ ಪತ್ರಿಕೆ

ಪ್ರಕಾಶಕರು

ಹೆಚ್. ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

**ಸಂಪಾದಕ ಮಂಡಲಿ**

ಪಂ॥ ಚನ್ನಪ್ಪ ಎರೇಸೀಮೆ

ಹಿ. ಎಸ್. ಚಂದ್ರಶೇಖರಯ್ಯ

ಬಸವರಾಜು
ಜಾಹೀರಾತು ವಿಭಾಗ

ಎಂ. ರೇಣುಕಾರಾಧ್ಯ
ಪ್ರಸಾರ ವಿಭಾಗ

ಆರ್. ಎಸ್. ಮಲ್ಲೇಶಪ್ಪ
ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

**ಚಂದಾ ವಿವರ**

ವಾರ್ಷಿಕ ಚಂದಾ 15-00 ರೂ

ಅಜೀವ ಸದಸ್ಯತ್ವ 51-00 ರೂ

ಪ್ರಕಾಶಕರು
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ.

**ಲೇಖಕರಲ್ಲಿ ಮನವಿ**

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

# ಸಂಪಾದಕೀಯ

ಭಾರತ ಸ್ವಾತಂತ್ರ್ಯ ನಂತರದ ಕರ್ನಾಟಕದ ೩೬ ವರ್ಷಗಳ ರಾಜಕೀಯ ಜೀವನದಲ್ಲಿ ಪ್ರಥಮತಃ ೧೦-೧-೮೩ ರಿಂದ ಕಾಂಗ್ರೆಸ್ಸೇತರ ಸರಕಾರ ಬಂದುದೊಂದು ದೊಡ್ಡ ತಿರುವು. ತಾ॥ ೫-೧-೮೩ ರಂದು ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಜನತಾ ಪಕ್ಷ ಎಲ್ಲಾ ಪಕ್ಷಗಳನ್ನು ಹಿಂದೆ ಸರಿಸಿ, ೯೪ ಜನ ವಿಧಾನ ಸಭಾ ಸದಸ್ಯತ್ವ ಪಡೆದುದೊಂದು ದೊಡ್ಡ ಸಾಹಸ. ಶ್ರೀಯುತರಾದ ರಾಮಕೃಷ್ಣ ಹೆಗ್ಗಡೆಯವರು ಪಕ್ಷದ ಮುಖಂಡರಾಗಿ ನೂತನ ಜನತಾ ಸರ್ಕಾರವನ್ನು ಇತರ ಪಕ್ಷಗಳ ಸಹಕಾರದೊಡನೆ ರಚಿಸಲು ೧೦-೧-೮೩ ರಂದು ಪ್ರಮಾಣ ವಚನ ಸ್ವೀಕರಿಸಿದರು. ತಮ್ಮ ಆಡಳಿತದ ರೂಪರೇಖೆಗಳನ್ನು ನೂತನ ಮುಖ್ಯಮಂತ್ರಿಗಳು ಅದೇ ರಾತ್ರಿ ಮಾಡಿದ ಆಕಾಶವಾಣಿ ಪ್ರಸಾರ ಭಾಷಣದಲ್ಲಿ ಜನತೆಯ ಮುಂದಿಟ್ಟಿದ್ದಾರೆ. ಅವರು ತಮ್ಮ ಭಾಷಣದಲ್ಲಿ ರಾಜ್ಯದಲ್ಲಿ ಈಗ ಬೇರೂರಿರುವ ಅನೇಕ ಬಗೆಯ ಭ್ರಷ್ಟಾಚಾರಗಳನ್ನು ಕಿತ್ತೊಗೆದು ಸ್ವಚ್ಛ ಆಡಳಿತವನ್ನು ಜನತೆಗೆ ಕೊಡುವುದರ ಮೂಲಕ ಬಡತನ, ಬೆಲೆಗಳ ಏರಿಕೆ, ದಲಿತರ ಸಮಸ್ಯೆ, ರೈತ ಕಾರ್ಮಿಕರ ಸಮಸ್ಯೆಗಳಿಗೆ ಕೈಲಾದಮಟ್ಟಿಗೆ ಪರಿಹಾರವೊದಗಿಸುವ ಮಾತನಾಡಿದ್ದಾರೆ. ಸತ್ಕಾರ ಸಮಾರಂಭಗಳ ಯುಗ ಹೋಗಿ ಸೇವಾತತ್ಪರತೆ, ಸ್ನೇಹ ಸಹಕಾರಗಳ ನೂತನ ಯುಗ ಪ್ರಾರಂಭವಾಗಿದೆ ಎಂದಿದ್ದಾರೆ. ಅಧಿಕಾರಿಗಳಿಗೆ ತಮ್ಮ ಮಾತಿನಿಂದ ಪರೋಕ್ಷವಾಗಿ ಎಚ್ಚರಿಕೆಯನ್ನು ನೀಡಿದ್ದಾರೆ. ಅವರ ಮಾನವೀಯವಾದ ಭಾಷಣದಲ್ಲಿ ಉದ್ಘೋಷಿಸಿರುವುದನ್ನೆಲ್ಲ ಕಾರ್ಯರೂಪಕ್ಕೆ ತರುವುದಕ್ಕೆ ಸಮಗ್ರ ಜನತೆಯ ಬೆಂಬಲದ ಆವಶ್ಯಕತೆ ಇದೆ. ಕಳೆದ ಹತ್ತಾರು ವರ್ಷಗಳಿಂದ ಆಳಕ್ಕೆ ಬೇರುಬಿಟ್ಟು ಹೆಮ್ಮರವಾಗಿ ಬೆಳೆದು ನಿಂತಿರುವ ಭ್ರಷ್ಟಾಚಾರ ವೃಕ್ಷವನ್ನು ಸಮೂಲವಾಗಿ ಕಿತ್ತು ಬಿಸಾಡುವುದು ಸುಲಭವಾದ ಕಾರ್ಯವಲ್ಲದಿದ್ದರೂ ಜನತೆ ಮನಸ್ಸು ಮಾಡಿದರೆ ಅಸಾಧ್ಯವೇನೂ ಅಲ್ಲ.

ಕಪ್ಪು ಹಣದಿಂದ ಪ್ರಬುದ್ಧವಾಗಿರುವ ಅನೇಕ ವ್ಯಕ್ತಿಗಳೊಡನೆ ಹೋರಾಟ ಈ ದಿಸೆಯಲ್ಲಿ ನಿರೀಕ್ಷಿತವೇ ಆಗಿದೆ. ಏಕೆಂದರೆ ಸಾರ್ವಜನಿಕರಲ್ಲಿ ಧನ ಸಂಗ್ರಹವಾದಂತೆಲ್ಲಾ ಅವರಿಗೂ ಪ್ರಭುತ್ವಶಕ್ತಿ ಬರುತ್ತದೆ. ಅವರೂ ತಮ್ಮ ಶಕ್ತಿಮೀರಿ ಸರಕಾರಕ್ಕೆ ಪ್ರತಿಭಟನೆ ಸಲ್ಲಿಸುವುದುಂಟು. ಸರಕಾರ ಶುದ್ಧಹಸ್ತ, ಶುದ್ಧಚಾರಿತ್ರ್ಯ

(48 ನೇ ಪುಟ ನೋಡಿ)

# ನವನೀತ

**ಅಕೃತಾತ್ಮಾನಮಾಸಾದ್ಯ ರಾಜಾನಮನಯೇ ರತಂ ।**
**ಸಮೃದ್ಧಾನಿ ವಿನಶ್ಯಂತಿ ರಾಷ್ಟ್ರಾ ನಗರಾಣಿಚ ॥**

—ರಾಮಾಯಣ

ಇಂದ್ರಿಯಗಳನ್ನು ಹಿಡಿತದಲ್ಲಿಡದ, ಕೆಟ್ಟ ನಡತೆಯಲ್ಲಿ ಆಸಕ್ತನಾದ ರಾಜನಿದ್ದರೆ, (ನಾಯಕನಿದ್ದರೆ) ರಾಷ್ಟ್ರಗಳೂ, ನಗರಗಳೂ ಎಷ್ಟೇ ಸಮೃದ್ಧವಾಗಿದ್ದರೂ ಹಾಳಾಗಿ ಹೋಗುತ್ತವೆ.

‡‡‡ ‡‡‡‡ ‡‡‡

**ರಾಜ್ಞಿ ಧರ್ಮಿಣಿ ಧರ್ಮಿಷ್ಠಾಃ ಪಾಪೇ ಪಾಪಪರಾಃ ಸದಾ ।**
**ರಾಜಾನಮನುವರ್ತಂತೇ ಯಥಾ ರಾಜಾ ತಥಾ ಪ್ರಜಾಃ ॥**

—ಭೋಜಪ್ರಬಂಧ

ರಾಜನು ಧರ್ಮಿಷ್ಠನಾದರೆ ಪ್ರಜೆಗಳೂ ಧರ್ಮಿಷ್ಠರಾಗುತ್ತಾರೆ. ಅವನು ಪಾಪಿಯಾದರೆ ಪ್ರಜೆಗಳೂ ಸದಾ ಪಾಪಿಗಳಾಗುತ್ತಾರೆ. ಪ್ರಜೆಗಳು ರಾಜನನ್ನು ಅನುಸರಿಸುತ್ತಾರೆ. ರಾಜನಿದ್ದಂತೆ ಪ್ರಜೆಯಲ್ಲವೆ ?

‡‡‡ ‡‡‡‡ ‡‡‡

**ದುಷ್ಟಸ್ಯ ದಂಡಃ ಸುಜನಸ್ಯ ಪೂಜಾ**
**ನ್ಯಾಯೇನ ಕೋಶಸ್ಯ ಚ ಸಂಪ್ರವೃದ್ಧಿಃ ।**
**ಅಪಕ್ಷಪಾತೋऽರ್ಥಿಷು ರಾಷ್ಟ್ರರಕ್ಷಾ**
**ಪಂಚೈವ ಯಜ್ಞಾಃ ಕಥಿತಾ ನೃಪಾಣಾಮ್ ॥**

—ಅತ್ರಿಸಂಹಿತಾ

ದುಷ್ಟರನ್ನು ದಂಡನೆಮಾಡುವುದು, ಒಳ್ಳೆಯವರಿಗೆ ಸನ್ಮಾನ ಮಾಡುವುದು, ನ್ಯಾಯವಾದ ರೀತಿಯಲ್ಲಿ ಖಜಾನೆಯನ್ನು ತುಂಬುವುದು, ನ್ಯಾಯವನ್ನು ಬೇಡಿಬಂದವರಿಗೆ ಪಕ್ಷಪಾತವಿಲ್ಲದೆ ನಿರ್ಣಯ ಕೊಡುವುದು, ರಾಜ್ಯದ ರಕ್ಷಣೆ ಮಾಡಿಕೊಳ್ಳುವುದು—ಇವು ಐದೂ ರಾಜನಾದವನಿಗೆ ಯಜ್ಞಗಳಂತೆ ಅವಶ್ಯವಾಗಿ ಮಾಡತಕ್ಕವುಗಳು.



# ಚಿಂತನ

ಸಿದ್ದಯ್ಯ ಪುರಾಣಿಕ

## ಆದರ್ಶ ಆಡಳಿತಗಾರ

ಆಡಳಿತಗಾರರಲ್ಲಿ ಎರಡು ಬಗೆಯೆಂದು ಹೇಳುತ್ತಾರೆ. ಒಂದು ಕೆಲಸ ಕೊಟ್ಟರೆ ಅದನ್ನು ಮಾಡಿ ಮುಗಿಸಿ ಇನ್ನೊಂದು ಕೆಲಸವನ್ನು ಕೇಳುವವರು ಒಂದು ಬಗೆ; ಒಂದು ಕೆಲಸವನ್ನು ಕೊಟ್ಟರೆ ಅದರ ಹೊಟ್ಟೆಯೊಳಗಿಂದಲೇ ಹಲವು ಹನ್ನೊಂದು ಕೆಲಸ ಸೃಷ್ಟಿಸಿ ಯಾವುದನ್ನೂ ಮಾಡದೆ ಕೈ ಎತ್ತುವವರು ಇನ್ನೊಂದು ಬಗೆ. ಸಾರ್ವಜನಿಕ ಆಡಳಿತದಲ್ಲಿ ಮೊದಲನೆಯ ವರ್ಗದವರು ಹೆಚ್ಚಿದರೆ ಅದು ಕಾಮಧೇನುವಾಗುತ್ತದೆ; ಎರಡನೆಯ ವರ್ಗದವರು ಹೆಚ್ಚಿದರೆ ಅದು ಬರಡು ಹಸುವಾಗುತ್ತದೆ.

ಯಾವುದೇ ಕೆಲಸವಿರಲಿ, ಅದು ಮಾಡಲೇಬೇಕಾದುದೆಂದು ಅದನ್ನು ವೀಕ್ಷಿಸಿದರೆ, ಪರೀಕ್ಷಿಸಿದರೆ ಅದನ್ನು ಮಾಡುವ ಮಾರ್ಗ ತೋರಿಯೇ ತೋರುತ್ತದೆ. ಅದು ಅಸಾಧ್ಯ ಕಾರ್ಯಗಳ ಪಟ್ಟಿಗೆ ಸೇರದಿದ್ದಾಗ, ಸಾರ್ವಜನಿಕ ಆಡಳಿತ ಸಾಧ್ಯವಿರುವುದು ಮಾತ್ರ ಸಾಧಿಸುವ ಕಲೆ; ಅಸಾಧ್ಯವಾದುದೇನಲ್ಲ, ಆದರೆ ಸಾಧ್ಯವಿರುವುದೂ ಸಹ ಮಾಡುವ ಮನಸ್ಸಿಲ್ಲದಿದ್ದರೆ ಅಸಾಧ್ಯವಾಗಿ ಪರಿಣಮಿಸುತ್ತದೆಯೆಂಬುದಕ್ಕೆ ಈ ದೇಶದ ಯಾವುದೇ ಕಾರ್ಯಾಲಯ ನೆಗ್ಗಳವಾದ ಉದಾಹರಣೆಗಳನ್ನು ಒದಗಿಸಬಲ್ಲುದು.

ಮಾಡುವ ಮನಸ್ಸು ಏಕೆ ಅಪರೂಪ ವಸ್ತುವಾಗಿದೆ ಇಲ್ಲಿ ? ಅದಕ್ಕೆ ನಿಖರವಾದ ಒಂದೇ ಉತ್ತರವಿರಲಾರದು. ಕೆಲಸ ಮಾಡಿ ಸಂತೋಷಿಸುವವರು ಕೆಲವರಾದರೆ ಆಗುವ ಕೆಲಸಕ್ಕೆಲ್ಲ ಕೊಕ್ಕೆ ಹಾಕಿ ಸಂತೋಷಿಸುವವರು ಹಲವರು. ಎರಡನೆಯ ವರ್ಗದವರು ವಿಘ್ನ ಸಂತೋಷಿಗಳು. ಇನ್ನೇನು, ಈ ಕೆಲಸಕ್ಕೆ ಮಂಜೂರಿ ಕಟ್ಟಿಟ್ಟ ಗಂಟು ಎನ್ನುವ ಹೊತ್ತಿನಲ್ಲಿ, ಈ ಕೆಲಸ ಮುಗಿಯುತ್ತ ಬಂತು, ಎಂದೆನ್ನುವ ಹೊತ್ತಿನಲ್ಲಿ ಒಂದು ಅನಿರೀಕ್ಷಿತ ಆಕ್ಷೇಪವೆತ್ತಿ ಅದು ಮಂಜೂರಾಗದಂತೆ ಮಾಡುವುದರಲ್ಲಿ ಅದು ಮುಗಿಯದಂತೆ ಮಾಡುವುದರಲ್ಲಿ ಇವರಿಗೆ ಅಪಾರವಾದ ಸಂತೋಷ. ಈ ಸಂತೋಷವನ್ನು ಆದಷ್ಟು ದೀರ್ಘಕಾಲದವರೆಗೆ ಅನುಭವಿಸಲೆಂದು ಇವರು ತಮ್ಮ ಎಲ್ಲ ಆಕ್ಷೇಪಗಳನ್ನು ಒಮ್ಮೆಗೇ ಎತ್ತುವುದಿಲ್ಲ. ಒಂದು ಸಲಕ್ಕೆ ಒಂದೇ ಆಕ್ಷೇಪ ಎತ್ತುವರು; ಅದಕ್ಕೆ ಉತ್ತರ ಬಂದಾಗ ಇನ್ನೊಂದು ಆಕ್ಷೇಪವೆತ್ತುವರು; ಅದರ

(43ನೇ ಪುಟ ನೋಡಿ)

# ಕ್ಷೇತ್ರವಾರ್ತೆ

—ಸಂಪಾದಕರು

ದಿನಾಂಕ 9–1–83 ನೆಯ ಭಾನುವಾರ ಬೆಳಿಗ್ಗೆ 8 ಘಂಟೆಗೆ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರ ಅಮೃತ ಹಸ್ತದಿಂದ ವ್ಯವಸಾಯ ಮತ್ತು ಕೈಗಾರಿಕಾ ವಸ್ತು ಪ್ರದರ್ಶನದ ಗುದ್ದಲಿ ಪೂಜೆಯನ್ನು ನೆರವೇರಿಸಲಾಯಿತು. ಶಿವರಾತ್ರಿ ಸಂದರ್ಭದಲ್ಲಿ ನಡೆಯುವ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಜಾತ್ರಾ ಅಂಗವಾಗಿ ಏರ್ಪಡಿಸುವ ಈ ವಸ್ತು ಪ್ರದರ್ಶನದ ವಿವಿಧ ಸಮಿತಿಗಳು ಕಾರ್ಯಪ್ರವೃತ್ತವಾಗಿವೆ. ಸರ್ವವಿಧ ಸಿದ್ಧತೆಗಳು ಭರದಿಂದ ಸಾಗುತ್ತಿವೆ.

ಅಂದೇ ಶ್ರೀ ಕ್ಷೇತ್ರದಲ್ಲಿ ಹಳೆಯ ವಿದ್ಯಾರ್ಥಿ ಸಂಘದ ಸರ್ವಸದಸ್ಯರ ಮಹಾಧಿವೇಶನ ಮಧ್ಯಾಹ್ನ 11 ಘಂಟೆಗೆ ಸಮಾವೇಶಗೊಂಡಿತ್ತು. ಶ್ರೀ ಕ್ಷೇತ್ರದ ಅನೇಕ ಅಭಿಮಾನೀ ಹಳೆಯ ವಿದ್ಯಾರ್ಥಿ ಮಿತ್ರರು ಸಮಾರಂಭದಲ್ಲಿ ಭಾಗವಹಿಸಿದ್ದರು. ಅಧಿವೇಶನದ ಅಧ್ಯಕ್ಷತೆಯನ್ನು ಪೂಜ್ಯ ಸನ್ನಿಧಿಯವರು ಅಲಂಕರಿಸಿದ್ದರು. ಸಭೆಯು ಶ್ರೀ ವಿದ್ವಾನ್. ಡಿ. ಸಿದ್ಧಲಿಂಗಯ್ಯ, ಕೊಂಡಜ್ಜಿ ಬಸಪ್ಪ ಮತ್ತು ಜಗದಾಂಬ ವಿಶ್ವೇಶ್ವರಯ್ಯ ಮುಂತಾದವರ ನಿಧನಕ್ಕೆ ಸಂತಾಪ ಸೂಚಕ ನಿರ್ಣಯವನ್ನು ಕೈಗೊಂಡು ಒಂದು ನಿಮಿಷ ಮೌನವನ್ನು ಆಚರಿಸಿತು. ನಂತರ ಸಭೆಯಲ್ಲಿ ಸಂಘ ಮತ್ತು ಸಂಘದವತಿಯಿಂದ ನಡೆಯುತ್ತಿರುವ ವಸ್ತು ಪ್ರದರ್ಶನಮತ್ತು "ಸಿದ್ಧಗಂಗಾ" ಪತ್ರಿಕಾ ಆಡಿಟ್ ಲೆಕ್ಕಪತ್ರವನ್ನು ಪರಿಶೀಲಿಸಲಾಯಿತು. ಸಂಘದ ಪ್ರಧಾನ ಕಾರ್ಯದರ್ಶಿಯವರಾದ ಶ್ರೀ ಎಂ. ಎಸ್. ಚೆನ್ನಬಸಪ್ಪನವರು ಸಂಘ ಸ್ಥಾಪನೆಯಾಗಿ 25 ವರ್ಷಗಳು ಪೂರ್ಣಗೊಂಡವು, ಆ ಕಾರಣ ಸಂಘದ ರಜತ ಮಹೋತ್ಸವವನ್ನು ಆಚರಿಸಬೇಕೆನ್ನುವ ಅಭಿಪ್ರಾಯವನ್ನು ಸಭೆ ಅನುಮೋದಿಸಿತು. ಸನ್ನಿಧಿಯವರು ಅಧಿವೇಶನವನ್ನು ಆಶೀರ್ವದಿಸುತ್ತಾ, ಸಂಘವು ಸ್ಥಾಪನೆಯಾದಂದಿನಿಂದಲೂ ರಜತ ಮಹೋತ್ಸವ, ಪಟ್ಟಾಧಿಕಾರ ಮತ್ತು ಸುವರ್ಣಮಹೋತ್ಸವ ಮುಂತಾದ ಮಹತ್ತರವಾದ ಮೂರು ಸಮಾರಂಭದ ಹೊಣೆಯನ್ನು ಹೊತ್ತು ಯಶಸ್ವಿಯಾಗಿ ತನ್ನ ಸೇವೆಯನ್ನು ಸಲ್ಲಿಸಿದೆ. ಸಂಘದ ಮಹತ್ತರ ಪಾತ್ರ ಸುವರ್ಣ ಮಹೋತ್ಸವದ ಕಾರ್ಯದಲ್ಲಿಯಂತೂ ಅಮೋಘವಾಗಿತ್ತು. ಆ ಸಮಾರಂಭದ ಬಗ್ಗೆ ಅನೇಕ ವಿದ್ವಾಂಸರಲ್ಲದೆ ರಾಷ್ಟ್ರಪತಿ ಎನ್. ಸಂಜೀವರೆಡ್ಡಿಯವರಿಂದಲೂ ಹೊಗಳಿಕೆಯ ಮಾತನ್ನು ಕೇಳಿ ಸಂತೋಷವಾಯಿತು. ಆ ಕೀರ್ತಿ ಸಂಘಕ್ಕಿದೆ ಎಂದೂ ಪೂಜ್ಯರು ಮುಂದುವರಿದು ಎಲ್ಲಕ್ಕಿಂತ ಮಿಗಿಲಾಗಿ ನೀವೆಲ್ಲರು ಶ್ರೀ ಕ್ಷೇತ್ರದ ಮೇಲಿ

(47ನೇ ಪುಟ ನೋಡಿ)



# ಶುದ್ಧಿ ಸಿದ್ಧಿಗಳ ಕ್ಷೇತ್ರ : ಸಿದ್ಧಗಂಗಾ

ಎನ್. ರಾಜಶೇಖರಯ್ಯ, ನಿವೃತ್ತ ಮುಖ್ಯೋಪಾಧ್ಯಾಯರು,
ಆರ್. ಆರ್. ಪ್ರೌಢಶಾಲೆ, ಅಂಕನಹಳ್ಳಿ ಮಠ.

ಭರತಖಂಡ ಕರ್ಮಭೂಮಿ. ಜ್ಞಾನ ಮೊದಲು ಇಲ್ಲಿ ಉದಯಿಸಿ ಬೇರೆಡೆಗೆ ಪ್ರವಹಿಸಿತು. ಭಾರತ ಧರ್ಮಕ್ಷೇತ್ರಗಳ ನಾಡು, ಋಷಿಮುನಿಗಳ ಹಾಗೂ ಸಾಧುಸಂತರ ಬೀಡು, ಅನುಭಾವಿಗಳ ಗೂಡು. ಪ್ರಾಚೀನ ಕಾಲದಿಂದಲೂ ಈ ದೇಶ, ತನ್ನದೇ ಆದ ಸಂಸ್ಕೃತಿ ಸಾಹಿತ್ಯಗಳನ್ನು ರೂಡಿಸಿ ಬೆಳೆಸಿಕೊಂಡು ಬಂದಿದೆ. ಹಲವಾರು ಭವ್ಯ ಪ್ರಾಚೀನ ಸಂಸ್ಕೃತಿಗಳಲ್ಲಿ ಭಾರತೀಯ ಸಂಸ್ಕೃತಿಯೂ ಒಂದು. ಅದು ಪ್ರಪಂಚದ ಸಂಸ್ಕೃತಿಗೆ ತನ್ನದೇ ಆದ ವಿಶಿಷ್ಟವಾದ ಕಾಣಿಕೆಯನ್ನು ಸಲ್ಲಿಸಿದೆ. ಇತ್ತೀಚೆಗೆ ಅಬ್ಬರಿಸಿ ಮೇಲೆರಗಿ ಬಂದ ಪಾಶ್ಚಾತ್ಯ ಸಂಸ್ಕೃತಿಯ ಸಾರವನ್ನು ಹೀರಿ ತನ್ನದಾಗಿ ಮೈಗೂಡಿಸಿಕೊಂಡುದು ಭಾರತೀಯ ಸಂಸ್ಕೃತಿಯ ಸಿಂಧು ವೈಶಾಲ್ಯಕ್ಕೆ ಸಾಕ್ಷಿ.

ಹಿಂದಿನಿಂದಲೂ ಭರತಖಂಡದ ಉದ್ದಗಲಕ್ಕೂ ಧರ್ಮಕ್ಷೇತ್ರಗಳು ಕಂಗೊಳಿಸುತ್ತವೆ. ಇವುಗಳಲ್ಲಿ ಹಲವು ಪ್ರಾಚೀನವಾದವು, ಮತ್ತೆ ಕೆಲವು ಆಧುನಿಕ ಭಾರತೀಯ ಸಂಸ್ಕೃತಿಯ ಸಂದೇಶವನ್ನೊಯ್ಯಲು, ಉದಯಿಸಿದವು. ಪ್ರಾಚೀನವೇ ಆಗಲಿ, ಅರ್ವಾಚೀನವೇ ಆಗಲಿ ಇದು ಅತಿ ಮಹತ್ತರವಾದವು. ಇಂಥವುಗಳಲ್ಲಿ ಪ್ರಾಚೀನವೂ, ತಪೋನಿಧಿಗಳ ತಾಣವೂ, ಸಂಸ್ಕೃತಿ ಸಾಹಿತ್ಯಗಳ ಸಂಗಮವೂ ಆದ ಧರ್ಮಕ್ಷೇತ್ರಗಳಲ್ಲಿ, ಶ್ರೀ ಸಿದ್ಧಗಂಗಾ ಕ್ಷೇತ್ರವೂ ಒಂದು. ಅದರ ಉಗಮ ತಲಕಾವೇರಿಯ ಹಾಗೆ, ಅದರ ಹರವು, ಮಹತ್ತು ಬೃಹತ್ತು ಅದ್ಭುತವಾದುದು. ಕರ್ನಾಟಕದ ಜನತೆಗೆ "ಸಿದ್ಧಗಂಗಾ" ಎನ್ನುವ ಮಾತು ತಾರಕಮಂತ್ರವಿದ್ದ ಹಾಗೆ. ಸಾಮಾನ್ಯ ಜನತೆಯಲ್ಲಿ "ಸಿದ್ಧಗಂಗೆ" ಎನ್ನುವ ಮಾತು ಎಂದೆಂದಿಗೂ ಅಚ್ಚಳಿಯದೆ ನಿಂತಿದೆ. ಜಾತಿಮತವಿಲ್ಲದೆ ಸರ್ವಜನಾದರಣೀಯ ಕ್ಷೇತ್ರವಾಗಿದೆ. ಮರ್ತ್ಯಕ್ಕೆ ಮಹವನ್ನು ತಂದು ತತ್ವ–ಧರ್ಮ-ಸಮಾಜ-ಸಾಹಿತ್ಯ ಮುಂತಾದ ಕ್ಷೇತ್ರಗಳಲ್ಲಿ ಇದು ಅನುಪಮವಾದ ಕ್ರಾಂತಿಯನ್ನೆಸಗಿದೆ. ಯುಪಜನದಲ್ಲಿ ತಲೆದೋರಿದ ಈ ಕ್ರಾಂತಿಯಿಂದ ಹಲವು ಹೊಸ ಮೌಲ್ಯಗಳು ತಲೆದೋರಿದವು. ಆಗ ಕರ್ಮ ಕ್ರಿಯೆಯಾಯಿತು, ಧರ್ಮ ದಯೆಯಾಯಿತು. ಸೃಷ್ಟಿಸತ್ಯವಾಯಿತು, ದೃಷ್ಟಿ ಲಿಂಗವಾಯಿತು, ಶಿವಾನುಭಾವ ಎಲ್ಲೆಲ್ಲಿಯೂ ಮೈವೆತ್ತು ಮಂಗಲವಾಯಿತು.

ಈ ಕ್ಷೇತ್ರ ಕರ್ನಾಟಕದ ಜನಮನದಲ್ಲಿ, ಹೀಗೆ ಶಾಶ್ವತ ಪ್ರಭಾವವನ್ನು ಬೀರಲು ಕಾರಣಗಳೇನಿರಬಹುದು. ಶ್ರೀ ಕ್ಷೇತ್ರ ಧಾರ್ಮಿಕವಾಗಿ, ಶೈಕ್ಷಣಿಕವಾಗಿ, ಸಾಮಾಜಿಕ

ವಾಗಿ ಎಲ್ಲರನ್ನೂ ಸೆಳೆದಿದೆ. ಹಳೆಯ ಕೊಳೆ ತೊಳೆದುಹೋಗಿ, ಹೊಸ ದೃಷ್ಟಿ ಉದಯ
ವಾಗಿದೆ. ಇಲ್ಲಿ ಜ್ಞಾನಾಕಾಂಕ್ಷಿಗಳಿಗೆ ಜ್ಞಾನವಿದೆ, ಧರ್ಮ ಜಿಜ್ಞಾಸುಗಳಿಗೆ ಧರ್ಮ
ವಿದೆ, ಸಮಾಜ ಪರಿಣತರಿಗೆ ಸಮಾಜ ಸುಧಾರಣೆಯಿದೆ, ಸಾಮಾನ್ಯ ಜನರಿಗೆ ಅವರ
ಜೀವನವನ್ನು ಪಾವನವನ್ನಾಗಿಸುವ ಶ್ರೀ ಗುರುವಿನ ದರ್ಶನವಿದೆ. ಹೀಗೆ ನಾಡಿನ ಜನ
ಜೀವನದಲ್ಲಿ ಹಾಸುಹೊಕ್ಕಾಗಿ ಬೆರತು ಅವರ ನೋವುನಲಿವುಗಳನ್ನರಿತು ನಡೆಯುವ
ಸಂಸ್ಥೆಯಾಗಿದೆ. ಇಲ್ಲಿ ಅನೇಕ ವಿದ್ಯಾ ಸಂಸ್ಥೆಗಳಿರುವುದರಿಂದ, ನಾಡಿನಾದ್ಯಂತ,
ವಿದ್ಯಾರ್ಥಿಗಳನ್ನಾಕರ್ಷಿಸಿ ಅವರ ಪ್ರತಿಭೆಯನ್ನರಳಿಸುವಲ್ಲಿ ಸಹಾಯವಾಗಿದೆ. ಶ್ರೀ
ಕ್ಷೇತ್ರದಲ್ಲಿ ತರಬೇತಿ ಹೊಂದಿದ ವಿದ್ಯಾರ್ಥಿಗಳು ನಾಡಿನಾದ್ಯಂತ ಸೇವೆಸಲ್ಲಿಸುತ್ತಿದ್ದಾರೆ.
ಶ್ರೀ ಕ್ಷೇತ್ರ ವಿರುವುದು ನಾಡಿನ ಒಂದು ಪುಣ್ಯವಿಶೇಷ.

"ಸಿದ್ಧಗಂಗಾ" ಮಂತ್ರ ಮುಗ್ಧವಾದ ಹೆಸರು. ಅಂತರಾರ್ಥದಲ್ಲಿ ಇದು ಸಿದ್ಧಿಯ
ತೌರ್ಮನೆ. ಕ್ಷೇತ್ರದ ಪರಿಸರವು ಪ್ರಕೃತಿದತ್ತವಾದುದು. ತುಮಕೂರು ನಗರದ ಜನ
ಸಂದಣಿಯಿಂದ, ಸದ್ದುಗದ್ದಲಗಳಿಂದ ದೂರ ಸರಿದು ಪ್ರಶಾಂತ ವಾತಾವರಣದಲ್ಲಿ
ಪ್ರಕೃತಿಯ ಮಡಿಲಲ್ಲಿ ಈ ನಿಸರ್ಗ ರಮಣೀಯತೆ ಎಂಥಹವರನ್ನಾದರು ಮೋಹ
ಗೊಳಿಸಿ ಆಕರ್ಷಿಸುತ್ತದೆ. ಆಧುನಿಕ ಸೌಕರ್ಯ ಸಂಪರ್ಕಗಳನ್ನು ಹೊಂದಿದೆ,
ಎಷ್ಟೇ ಆಧುನಿಕವಾದರೂ ಹಿಂದಿನ ಗುರುಕುಲಾಶ್ರಮದ ನೆನಪನ್ನುಂಟುಮಾಡುತ್ತದೆ.
ಇಂದಿನ ನಾಗರಿಕತೆಯ ನಾಗಿಣಿಯು ಹೆಡೆ ಎತ್ತಿ ಕುಟುಕುತ್ತಿರುವಾಗ, ಇಂಥಹ
ಕ್ಷೇತ್ರಗಳ ಆವಶ್ಯಕತೆ ಜನತೆಗೆ ಅತ್ಯಗತ್ಯ. ಇಲ್ಲಿಗೆ ಬರುವ ಭಕ್ತಸಂಕುಲ ನಾನಾ ವಿಧ
ವಾದದ್ದು. ಜ್ಞಾನದಾಹಿಗಳಾಗಿ, ಧರ್ಮಕ್ಷೇತ್ರ ದರ್ಶನಕ್ಕಾಗಿ, ಮೇಲಾಗಿ ಶ್ರೀಗುರುವಿನ
ದರ್ಶನಕ್ಕಾಗಿ ಬಂದವರು ತಮ್ಮ ಆತ್ಮದ ಹಸಿವನ್ನು ನೀಗಿಕೊಂಡು ಹಿಂತಿರುಗುತ್ತಾರೆ.
ಮೂರರಿಂದ ನಾಲ್ಕು ಸಾವಿರ ಮಂದಿ ವಿದ್ಯಾರ್ಥಿಗಳಿಗೆ ಇದರ ಜೊತೆಗೆ ದಿನನಿತ್ಯ
ಬರುವ ಸಾವಿರಾರು ಮಂದಿ ಯತ್ರಾರ್ಥಿಗಳಿಗೆ ಅನ್ನ, ವಸತಿ ಸೌಕರ್ಯ ಸಾಮಾನ್ಯರ
ಊಹೆಗೆ ನಿಲುಕುವಂತಹುದಲ್ಲ. ಒಂದು ಸರ್ಕಾರವು ಮಾಡಬಹುದಾದ ಕೆಲಸವನ್ನು
ಶ್ರೀಕ್ಷೇತ್ರ ಮಾಡುತ್ತಿದೆ ಎಂದರೆ ಆಚ್ಚರಿಯೇ ಸರಿ! ಇದು ಹಿಂದಿನ ಕುಲಪತಿಗಳಾದ
ಭಾರದ್ವಾಜರ ಜ್ಞಾಪಕವನ್ನು ತರುತ್ತದೆ! ಶ್ರೀ ಕ್ಷೇತ್ರದಲ್ಲಿ ತರಬೇತಿ ಪಡೆದ ವಿದ್ಯಾರ್ಥಿ
ಗಳು, ದೈಹಿಕವಾಗಿ ಮಾನಸಿಕವಾಗಿ ಹಾಗೂ ಧಾರ್ಮಿಕವಾಗಿ ವಿಕಾಸ ಹೊಂದು
ತ್ತಾರೆ, ಎಲ್ಲಿದ್ದರೂ ಅಲ್ಲೇ ಸೇವಾಕಾಂಕ್ಷಿಗಳಾಗಿರುತ್ತಾರೆ.

ಈ ಕ್ಷೇತ್ರದಲ್ಲಿ ಮೊದಲಿನಿಂದಲೂ ಮಹಾ ತಪಸ್ವಿಗಳೂ, ಶರಣರೂ ಆಗಿ
ಹೋಗಿದ್ದಾರೆ. ಶ್ರೀಕ್ಷೇತ್ರ ದಿವ್ಯಮೂರ್ತಿ ಎಡೆಯೂರು ಸಿದ್ಧಲಿಂಗೇಶ್ವರ ಭವ್ಯದಿವ್ಯ
ಪರಂಪರೆಯಿಂದ ನಡೆದುಬಂದು, ಅವರ ಅನಂತರ ಹಲವಾರು ಶಿವಶರಣರು ತಪವೆಸ
ಗಿದ ತಾಣವಾಗಿದೆ. ಇತ್ತೀಚಿನ ಸ್ವಾಮಿಗಳವರಾದ ಶ್ರೀ ಅಡವಿ ಸ್ವಾಮಿಗಳು,



ಉದ್ಧಾನ ಶಿವಯೋಗಿಗಳು ಮತ್ತು ಸಿದ್ಧಗಂಗೆಗೆ ಆಧುನಿಕ ರ ಸ ಲೇ ಪ ನ ವ ನ್ನಿ ತ್ತ
ಡಾ|| ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳೆಂದರೆ ಕರ್ಣಾಟಕದ ಜನತೆಗೆ ದೈವಕ್ಕೆ ಸಮಾನ.
ಉದ್ಧಾನ ಶಿವಯೋಗಿಗಳ ವಿಚಾರವಂತೂ ಇಂದಿಗೂ ಜನತೆಯಲ್ಲಿ ಪವಾಡ ಸದೃಶವಾಗಿ
ಉಳಿದುಬಂದಿದೆ. ಅವರ ನಂತರ ಶ್ರೀಮ.ನಿ.ಪ್ರ.ಸ್ವ. ಶ್ರೀ ಶಿವಕುಮಾರ ಸ್ವಾಮಿಗಳವ
ರೆಂದರೆ ಕರ್ಣಾಟಕ ಜನಮನದಲ್ಲಿ ಸಜೀವ ದೇವರಿದ್ದಂತೆ. ಅವರ ದರ್ಶನವೆಂದರೆ
ಮಹಾ ಭಾಗ್ಯವೆಂದು ಜನರಲ್ಲಿ ಅಚ್ಚಳಿಯದ ನಂಬಿಕೆ. ಅವರ ಪಾದ ಸ್ಪರ್ಶವೆಂದರೆ
ಪಾಪ ಪರಿಹಾರ ಎಂಬ ಭಾವನೆಯಿದೆ. ಅವರ ಕಾಲದಲ್ಲಿ ನಡೆಯುತ್ತಿರುವ ದಾಸೋಹ
ಸಾಮಾನ್ಯರಿಂದ ಸಾಧ್ಯವಿಲ್ಲದ ಮಾತು. ಅಣ್ಣ ಬಸವಣ್ಣ ಕಲ್ಯಾಣದಲ್ಲಿ ಅನುಭವ
ಮಂಟಪವನ್ನು ಸ್ಥಾಪಿಸಿ ಜ್ಞಾನದಾಹಿಗಳಿಂದ, ಕಾಯಕ ನಿರತರಾದ ಶಿವಶರಣರ
ಗೋಷ್ಠಿ ನಡೆಸುತ್ತಿದ್ದರಂತೆ ಡಾ|| ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ ಕಾರ್ಯಬಾಹುಳ್ಯ
ವನ್ನು ದರ್ಶಿಸಿದವರಿಗೆ ಅನುಭವಮಂಟಪ ಮತ್ತು ಮಹಾಮನೆಯ ದಾಸೋಹದ
ಜ್ಞಾಪಕ ಬರದಿರದು. ಶ್ರೀ ಶ್ರೀಗಳವರ ದರ್ಶನ ಅನಿರ್ವಚನೀಯವಾದುದು, ಮಾತಿ
ನಿಂದ ಬಣ್ಣಿಸಲು ಸಾಧ್ಯವಿಲ್ಲ. "ಯತೋವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ
ಸಹ" ಎಂಬ ಉಪನಿಷದ್ವಾಕ್ಯ ಜ್ಞಾಪಕಕ್ಕೆ ಬರುತ್ತದೆ.

ಕಾಡಾಗಿ ಮೇಡಾಗಿ ಇದ್ದ ಒಂದು ಪ್ರದೇಶವನ್ನು ವಿದ್ಯೆಯ ಆಗರವಾಗಿ, ಆಧ್ಯಾ
ತ್ಮಿಕದ ತೌರುಮನೆಯಾಗಿ, ಒಂದು ಮಹಾ ಸಂಸ್ಥೆಯಾಗಿ ನಿರ್ಮಾಣ ಮಾಡಿ, ಕಲೆ
ಶಾಸ್ತ್ರ, ವಿಜ್ಞಾನಗಳಿಗೆ ಕೇಂದ್ರವನ್ನಾಗಿ ಮಾಡಿದ ಪವಾಡ ಶ್ರೀ ಶ್ರೀ ಶಿವಕುಮಾರ
ಸ್ವಾಮಿಗಳವರಿಗೆ ಸೇರಿದುದು. ಡಾ|| ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳೆಂದರೆ ಕ್ರಿಯಾ
ಜ್ಞಾನಗಳೇ ಮೈವೆತ್ತಿದಂತೆ. ಅವರ ಭಾಷಣ ಉಪದೇಶಗಳೆಂದರೂ ಅಷ್ಟೇ ಆಳವಾದ
ರುಚಿಕಟ್ಟಾದವುಗಳು. ಅವರನ್ನು ದರ್ಶಿಸಿದಾಗ ಆಗುವ ಅನುಭವ ಚನ್ನಬಸವಣ್ಣನವರ
ವಚನವನ್ನು ಜ್ಞಾಪಕಕ್ಕೆ ತರುತ್ತದೆ.

ಸಮತೆಯೆಂಬ ಕಂಥೆಯ ತೊಟ್ಟು
ಸುಬುದ್ಧಿಯೆಂಬ ಟೊಪ್ಪರವನಿಕ್ಕಿ,
ವಿಷಯವೆಂಬ ಹಾವುಗೆಯ ಮೆಟ್ಟಿ,
ತಮಂಧವೆಂಬ ಕುಣಿಯ ಬೀಳದೆ,
ಮದವೆಂಬ ಚೇಳ ಮೆಟ್ಟದೆ,
ವೈರಾಗ್ಯವೆಂಬ ಕೊರಡನೆಡಹದೆ,
'ಭಕ್ತಿ ಭಿಕ್ಷಾಂ ದೇಹಿ' ಎಂದು ಬಸವಣ್ಣ ಕಪ್ಪಡಿಗೆ ಬಂದ
ಕೂಡಲ ಚನ್ನ ಸಂಗಮ ದೇವಾ ||

ಶ್ರೀಗಳವರು ದಕ್ಷ ಕ್ರಿಯಾಶಾಲಿಗಳೂ, ವಿದ್ಯಾಭಿಮಾನಿಗಳೂ, ವಿಶ್ವಾಸಪರರೂ, ಸರಳ ಜೀವಿಗಳೂ, ಇಂತಹ ಮಹನೀಯರ ಭವ್ಯದಿವ್ಯಜೀವನ ಆದರ್ಶವಾದುದು. ಸಾಮಾನ್ಯವಾಗಿ ಕೆಲವರು ಭಾವಿಸಿರುವಂತೆ, ಸ್ವಾಮಿಗಳ ಜೀವನವೆಂದರೆ ಸುಖಮಯ ಜೀವನವೆಂಬ ಭಾವನೆ. ಶ್ರೀ ಮಠದಲ್ಲೇ ಇದ್ದು ಸ್ವಾಮೀಜಿಯವರ ದಿನಚರಿಯನ್ನು ದರ್ಶಿಸಿದವರಿಗೆ ಆಗುವ ಅನುಭವ ಬೇರೆ ತೆರನಾದುದ್ದು. ಬ್ರಾಹ್ಮೀಮುಹೂರ್ತದಲ್ಲೆದ್ದು ನಿತ್ಯ ಪೂಜಾ ವಿಧಗಳನ್ನು ಮುಗಿಸಿದನಂತರ ನಾಡಿನ ನಾನಾ ಮೂಲೆಯಿಂದ ಬಂದಿರುವ ಭಕ್ತರ ಯೋಗಕ್ಷೇಮ ವಿಚಾರಣೆ ಅವರ ಪ್ರಶ್ನೆಗಳಿಗೆ ಉತ್ತರ. ಅನಂತರ ತಮ್ಮ ಕಾರ್ಯಾಲಯದಲ್ಲಿ ಕಾಗದ ಪತ್ರಗಳಿಗೆ ಉತ್ತರ. ಮಧ್ಯಾಹ್ನ ಮತ್ತೆ ಪೂಜೆ ಸ್ವಲ್ಪಕಾಲ ವಿಶ್ರಾಂತಿ. ಅನಂತರ ಶ್ರೀಗಳವರ ಕಾರ್ಯಾಲಯದಲ್ಲಿ ಬಿಡುವಿಲ್ಲದ ಕಾರ್ಯ. ರಾತ್ರಿ ಎಂಟು ಗಂಟೆಯ ನಂತರ ಮತ್ತೆ ಪೂಜೆ, ಅನಂತರ ಅಧ್ಯಯನ. ಶ್ರೀಗಳವರ ಅಧ್ಯಯನ ನಿರಂತರವಾದುದ್ದು. ಅವರು ಬಹುಶೃತರು. ಕನ್ನಡ, ಸಂಸ್ಕೃತ, ಇಂಗ್ಲೀಷ್ ಸಾಹಿತ್ಯದಲ್ಲಿ ಆಳವಾದ ಪಾಂಡಿತ್ಯ ಉಳ್ಳವರು. ನಿಜವಾದ ಶರಣ ಜೀವನವನ್ನಿಲ್ಲಿ ಕಾಣಬಹುದು. ವಯಸ್ಸು ಎಪ್ಪತ್ತರ ಗಡಿ ದಾಟಿದ್ದರೂ ಅತ್ಯಂತ ಶ್ರದ್ಧಾ ಮತ್ತು ಉತ್ಸಾಹಪೂರಿತ ಹೃದಯ. ಯಾವಾಗಲೂ ಆಚಾರ, ಧರ್ಮ ನಡೆನುಡಿ ದೇಶ ಇವುಗಳ ಬಗೆಗೆ ಚಿಂತನೆ.

ಶ್ರೀ ಸಿದ್ಧಗಂಗೆ ಕರ್ನಾಟಕ ಜನತೆಯ ಆಧ್ಯಾತ್ಮಿಕ ಸಂಪತ್ತು ಈಗಿನ ನವ ನಾಗರಿಕತೆಯ ಸೋಂಕಿನ ಗುಂಗಿನಲ್ಲಿ ನಮ್ಮ ಯುವಜನಕ್ಕೆ ದಾರಿದೀಪವಾಗಿದೆ. ಶ್ರೀ ಕ್ಷೇತ್ರ ಜಾತಿಮತ ಪಂಥಗಳ ಸೋಂಕಿಲ್ಲದೆ ಎಲ್ಲರಿಗೂ ಆಶ್ರಯ ನೀಡಿ ವಿದ್ಯಾದಾನ ಮಾಡಿ ಉತ್ತಮ ಜನಾಂಗವನ್ನು ರೂಪಿಸುತ್ತಿರುವುದು ನಾಡಿನ ಭಾಗ್ಯ. ಶ್ರೀಗಳವರಿಗೆ ನಮ್ಮ ಪ್ರಾಚೀನ ಜ್ಞಾನ ಸಂಪತ್ತಾದ ಸಂಸ್ಕೃತವೆಂದರೆ ಬಹಳ ಸಂತೋಷ. ಶ್ರೀ ಕ್ಷೇತ್ರದಲ್ಲಿ ಸಂಸ್ಕೃತ ಮಹಾಪಾಠಶಾಲೆಯನ್ನು ಸ್ಥಾಪಿಸಿ ಅದರ ಬೆಳವಣಿಗೆಗೆ ಆದ್ಯ ಗಮನವೀಯುತ್ತಿದ್ದಾರೆ. ಬಹು ಮಂದಿ ವಿದ್ವಜ್ಜನರಿಗೆ ಆಶ್ರಯದಾತರಾಗಿ ಪೋಷಕರಾಗಿದ್ದಾರೆ. ಅವರ ಕರಸಂಜಾತರಾದ ಶ್ರೀಮ||ನಿ||ಪ್ರ||ಸ್ವ||ಶ್ರೀ ಶ್ರೀ ಗೌರೀಶಂಕರ ಸ್ವಾಮೀಜಿಯವರಿಂದ ಜನತೆ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರು ಮಾಡದೆ ಬಿಟ್ಟಿರುವುದನ್ನೆಲ್ಲಾ ನಿರೀಕ್ಷಿಸುತ್ತಿದೆ. ಶ್ರೀ ಕ್ಷೇತ್ರ ಇನ್ನೂ ನೂರ್ಮಡಿ, ಸಾಸಿರ್ಮಡಿಯಾಗಿ ಬೆಳೆದು, ಅನೇಕ ಶತಸಂವತ್ಸರಗಳು, ನಾಡಿನ ಜ್ಞಾನಜ್ಯೋತಿಯನ್ನು ಬೆಳಗುವ ನಂದಾದೀಪವಾಗಲೆಂದು ಕರ್ನಾಟಕ ಜನಪದ, ದಯಾಮಯನಾದ ಭಗವಂತನನ್ನು ಪ್ರಾರ್ಥಿಸುತ್ತದೆ.

ಭದ್ರಂ–ಶುಭಂ–ಮಂಗಳಂ



# ಮಾನವ ಚರಿತ್ರೆಯ ಸವಾಲು

—ಶ್ರೀ ಹೊ. ವೆ. ಶೇಷಾದ್ರಿ

'ಇತಿಹಾಸದ ಅಧ್ಯಯನ'–A Study of History–ಇದು ಆರ್ನಾಲ್ಡ್ ಟಾಯನ್‌ಬೀ ಬರೆದ ವಿಶ್ವವಿಖ್ಯಾತ ಗ್ರಂಥ. ಆ ಗ್ರಂಥದ ಆರು ಖಂಡಗಳ ಪ್ರಕಾಶನ ಕಾರ್ಯ ಮುಗಿದದ್ದು, 1939ರಲ್ಲಿ. ಅನಂತರ ಅದಕ್ಕೆ ಹಲಕೆಲವು ವಿದ್ಯಮಾನಗಳನ್ನು ಜೋಡಿಸಿ ಆತ 1946ರವರೆಗೆ ಕತೆಯನ್ನು ತಂದು ನಿಲ್ಲಿಸಿದ. ಅದರ 'ಗ್ರಂಥ ಸಂಗ್ರಹ' ಮಾಡಿದಾತ ಡಿ. ಸಿ. ಸೋಮರ್‌ವೆಲ್. ಪ್ರಸ್ತುತ ಲೇಖನಕ್ಕೆ ಆಧಾರವಾಗಿ ತೆಗೆದುಕೊಂಡಿರುವುದು ಈ ಗ್ರಂಥಸಾರವನ್ನೇ

ಮಾನವ ಇತಿಹಾಸವನ್ನು ಅರ್ಥಮಾಡಿಕೊಳ್ಳಲು ಹೊಸತೊಂದು ದೃಷ್ಟಿಯನ್ನು ನೀಡುವಂತಹ ಮಹಾ ಗ್ರಂಥ ಇದು ಎನ್ನುವುದರಲ್ಲಿ ಸಂದೇಹವಿಲ್ಲ.

**ಆತ್ಮವಿಮರ್ಶೆಗೆ ಪ್ರಚೋದನೆ :** ವಿವಿಧ ಮಾನವ ಸಮೂಹಗಳ ಏಳು-ಬೀಳುಗಳ ಚಿತ್ರಪಟವು ಆ ಪುಟಗಳಲ್ಲಿ ಕಣ್ಣೆದುರಿಗೆ ಹಾದುಹೋಗುವ ಜೊತೆಜೊತೆಗೇ ಆ ರೋಮಾಂಚಕಾರಿ ದೃಶ್ಯಗಳೊಳಗಿನ ಕಾರಣ ಪರಿಣಾಮಗಳ ಮರ್ಮವೂ ಮನಸ್ಸಲ್ಲಿ ಇಳಿಯುತ್ತಾ ಹೋಗುತ್ತದೆ. ಸ್ವಾಭಾವಿಕವಾಗಿಯೇ, ಸಂವೇದನಶೀಲ ಭಾರತೀಯ ಓದುಗನೊಬ್ಬನ ಮನದಲ್ಲಿ ಇಲ್ಲಿನ ಸಮಾಜಜೀವನದ ಚಿತ್ರಗಳೂ ಜೊತೆಜೊತೆಗೇ ಮೂಡಿಬರುತ್ತವೆ. ನಿಜ, ಟಾಯನ್‌ಬೀ ಸಮಗ್ರ ಮಾನವ ಜನಾಂಗವನ್ನು ತನ್ನ ಸಮೀಕ್ಷೆಯ ತೆಕ್ಕೆಯೊಳಗೆ ತಂದುಕೊಂಡಿದ್ದಾನೆ. ಆದರೆ ಅವನ ಅಧ್ಯಯನವು ಪ್ರಧಾನವಾಗಿ ಯುರೋಪ್ ಖಂಡದ ಜನರನ್ನು ಕುರಿತಾದ ಸಮೀಕ್ಷೆ. ಭಾರತದಲ್ಲಿನ ಪ್ರಾಚೀನ ಹಿಂದು ಸಮಾಜ ಹಿಂದು ನಾಗರಿಕತೆಗಳ ಕುರಿತಾಗಿ ಅಲ್ಲಲ್ಲಿ ಚರ್ಚೆ ಬಂದಿದ್ದರೂ ಅದು ಕೇವಲ ಸ್ಥೂಲರೂಪವಾಗಿ ಮಾತ್ರ. ಅಷ್ಟೇ ಅಲ್ಲದೆ, ಈಚೆಗೆ ಇಲ್ಲಿನ ಭೂಗರ್ಭ ಶಾಸ್ತ್ರಜ್ಞರು, ಪ್ರಾಚ್ಯವಸ್ತು ವಿಶಾರದರು ಹೊರೆತೆಗೆದಿರುವ ಪ್ರಾಚೀನ ವೈಭವದ ತಥ್ಯಗಳು ಆ ಗ್ರಂಥ ಬರೆದಾಗ ಅಷ್ಟಾಗಿ ಬೆಳಕು ಕಂಡಿರಲಿಲ್ಲ. ಲ್ಯಾಟಿನ್, ಗ್ರೀಕ್ ಮುಂತಾದ ಪ್ರಾಚೀನ ಸಾಹಿತ್ಯಗಳ ನಿಕಟವಾದ ಪರಿಚಯ ಟಾಯನ್‌ಬೀಗೆ ಇದ್ದಂತೆ ಭಾರತದ ಪುರಾತನ ಸಾಹಿತ್ಯ ಇಲ್ಲಿನ ಲಿಪಿ-ಭಾಷೆಗಳ ಪರಿಚಯವೂ ಆತನಿಗೆ ಇದ್ದಂತೆ ತೋರುವುದಿಲ್ಲ. ಪದೇಪದೇ ಗ್ರೀಕ್, ಯಹೂದಿ, ಈಸಾಯಿ ಪುರಾಣದ ಕತೆಗಳು ಅದರಲ್ಲಿ ಎದ್ದು ತೋರುವಂತೆ ವೇದ, ರಾಮಾಯಣ ಮಹಾಭಾರತಗಳು, ಬೌದ್ಧ ಜೈನ ವೈದಿಕ ಪುರಾಣಗಳು, ಇವುಗಳ ಉಲ್ಲೇಖ ಕಂಡು

ಬರುವುದಿಲ್ಲ. ಆದರೆ ಟಾಯನ್‌ಬೀ ಮಾನವ ಸಮಾಜಗಳ ನಿರ್ಮಿತಿ, ಉನ್ನತಿ, ಅವನತಿಗಳ ಕುರಿತಾಗಿ ಮಂಡಿಸಿರುವ ಮೌಲಿಕ ಮೀಮಾಂಸೆಯನ್ನು ನಮ್ಮ ಸಮಾಜಕ್ಕೂ ಅನ್ವಯಿಸಿ ಆತ್ಮವಿಮರ್ಶೆಮಾಡಿಕೊಳ್ಳಬೇಕೆಂಬ ಪ್ರಚೋದನೆಯನ್ನು ಮಾತ್ರ ಆ ಗ್ರಂಥ ಅವಶ್ಯ ನೀಡುತ್ತದೆ.

ಮಾನವ ನಾಗರಿಕತೆಯು ವಿಕಸನಗೊಳ್ಳುವ ರೀತಿ ಯಾವುದು ಎನ್ನುವ ಕುರಿತಾಗಿ 11, 12ನೆಯ ಅಧ್ಯಾಯಗಳಲ್ಲಿ ಟಾಯನ್‌ಬೀ ಮುಂದಿಟ್ಟಿರುವ ವಿಚಾರಸರಣಿಯೊಂದಿಗೆ ನಮ್ಮ ಸಮಾಜದ ವಿಶಿಷ್ಟ ಪದ್ಧತಿಗಳನ್ನು ತಾಳೆ ಹಾಕಿ ನೋಡಿದಾಗ ಏನಾದರೂ ಬೋಧಪ್ರದ ಅಂಶಗಳು ಹೊರಬೀಳುತ್ತವೆಯೇ ? ಈ ಪ್ರಶ್ನೆಯನ್ನು ಪರಿಶೀಲಿಸುವುದು ನಮಗೆ ತುಂಬ ಉದ್ಬೋಧಕ.

ಟಾಯನ್‌ಬೀ ಗುರುತಿಸಿರುವ ಒಟ್ಟು ಮಾನವ ನಾಗರಿಕತೆಗಳ ಸಂಖ್ಯೆ 26. ಆ ಪೈಕಿ 16 ಈಗಾಗಲೇ ಪೂರ್ತಿ ಅಸ್ತಂಗತವಾಗಿವೆ. ಉಳಿದ 10ರ ಪೈಕಿ ಸಹ 9–ಬಹುಶಃ ಪಾಶ್ಚಾತ್ಯ ನಾಗರಿಕತೆಯೊಂದನ್ನುಳಿದು ಎಲ್ಲವೂ ಈಗಾಗಲೇ ಮುರಿದು ಬಿದ್ದಿವೆ–ಎನ್ನುತ್ತಾನೆ ಟಾಯ್ನಬೀ.

ಆರ್ನಾಲ್ಡ್ ಟಾಯನ್‌ಬೀಯಂತಹ ಮಹಾ ವಿದ್ವಾಂಸನ ಈ ಮೇಲಿನ ವಿಶ್ಲೇಷಣೆಯನ್ನು ಓದಿದಾಗ ಭಾರತದ ಮಕ್ಕಳಾದ ನಮ್ಮ ಮನಸ್ಸಿಗೆ ಧಕ್ಕೆ ತಟ್ಟುವುದು ಸ್ವಾಭಾವಿಕ. ಏಕೆಂದರೆ ನಮ್ಮ ಹಿಂದು ಸಮಾಜ, ಹಿಂದು ನಾಗರಿಕತೆಗಳನ್ನು ಸಹ ಅವನು "ಭಗ್ನಗೊಂಡಿರುವ, ಅಳಿಗಾಲದ ಹಾದಿ ಹಿಡಿದಿರುವ, 9 ನಾಗರಿಕತೆಗಳಲ್ಲಿ ಒಂದು" ಎಂದು ಪರಿಗಣಿಸಿದ್ದಾನೆ. (ಸದ್ಯ ಈಗಾಗಲೇ ಗತಿಸಿಹೋದ 19ರ ಸಾಲಿಗೆ ಸೇರಿಸಿಲ್ಲವಲ್ಲ ಎಂಬುದೇ ನಮ್ಮ ಪುಣ್ಯ!) ಭಗ್ನಗೊಳ್ಳುವುದು, ಅಳಿಗಾಲದ ಹಾದಿ ಹಿಡಿಯುವುದು, ಎಂದರೆ ತನ್ನ ಸ್ವಂತಿಕೆಯನ್ನು ಕಳೆದುಕೊಳ್ಳುವುದು ಎಂದರ್ಥ. ಇಂದು ಹಿಂದು ಸಮಾಜವನ್ನು ಒಳಗೊಂಡಂತೆ ನಾಗರಿಕತೆಗಳು ಪಾಶ್ಚಾತ್ಯ ನಾಗರಿಕತೆಯ ಪಡಿಯಚ್ಚುಗಳಾಗಿ ರೂಪುಗೊಳ್ಳುತ್ತಿವೆ, ತಮ್ಮ ಸ್ವತಂತ್ರ ಅಸ್ಮಿತೆಗಳನ್ನು ಅವು ಕಳೆದುಕೊಳ್ಳುತ್ತಿವೆ ಎನ್ನುವುದು ಟಾಯ್ನಬೀಯ ಹೇಳಿಕೆ. ಇಂದಿನ ವೈಜ್ಞಾನಿಕ, ತಾಂತ್ರಿಕ ನಾಗರಿಕತೆಯ ಪಾಶ್ಚಾತ್ಯರ ಕೊಡುಗೆ ಎನ್ನುವುದರಲ್ಲಿ ಸಂದೇಹವಿಲ್ಲ. ಅದರ ಅಷ್ಟಬಾಹುವಿನ ಅಪ್ಪುಗೆಯಲ್ಲಿ ಇಡೀ ವಿಶ್ವವೆಲ್ಲ ಸಿಲುಕಿದೆ ಎನ್ನುವ ಮಾತೂ ನಿಜವೇ.

ಇನ್ನು, "ಉಳಿದುಕೊಂಡಿರುವ ಪಾಶ್ಚಾತ್ಯ ನಾಗರಿಕತೆ"ಯ ಭವಿತವ್ಯವಾದರೂ ಹೇಗಿದೆ ? ಈ ಬಗ್ಗೆ ಟಾಯನ್‌ಬೀ ವಿಚಾರದ ಧಾಟಿ ಹೀಗಿದೆ: "18 ನೆಯ ಶತಮಾನದಲ್ಲಿ ಐರೋಪ್ಯ ನಾಗರಿಕತೆಯು ಉದ್ದೀಪನಗೊಂಡಾಗ ಅದರಲ್ಲಿ ತೋರಿಬಂದ ಆಧ್ಯಾತ್ಮಿಕ ದಾರಿದ್ರ್ಯದ ಕಹಿಫಲವಾಗಿ ನಮ್ಮ ಪಾಶ್ಚಾತ್ಯ ಜಗತ್ತು ಎರಡನೆಯ



(1939–45) ಭೀಷಣ ಸಮರ ತಾಂಡವದಲ್ಲಿ ಸಿಕ್ಕಿಬೀಳುವಂತಾಗಿದೆ. ಇದರ ಪರಿಣಾಮ ಏನಾದೀತೆಂದು ಹೇಳುವ ಸ್ಥಿತಿಯಲ್ಲಿ ನಾವಿಲ್ಲ. ತೀವ್ರವಾಗಿ ಬೆಳೆಯುತ್ತಿರುವ ಇಂದಿನ ಅನಾಹುತ ಸರಣಿಯನ್ನು ಕಾಣುವಾಗ ನಮ್ಮ ಭವಿಷ್ಯದ ಬಗೆಗೆ ಕರಾಳ ಶಂಕೆಗಳು ಮನಸ್ಸನ್ನು ಆವರಿಸುತ್ತವೆ. ಇಂದಿನ ಬಿಕ್ಕಟ್ಟಿನ ವಿಷಗಳಿಗೆಯು ನಮ್ಮ ಶ್ರದ್ಧೆ, ನಿರೀಕ್ಷಣೆಗಳ ಬುಡವನ್ನೆ ಅಲ್ಲಾಡಿಸುತ್ತಿದೆ. ನಮ್ಮನ್ನು ಉಳಿಸಬಲ್ಲ ಆಧ್ಯಾತ್ಮಿಕ ಗುಣಸಂಪತ್ತನ್ನು ಅತ್ಯಧಿಕವಾಗಿ ಸಮೃದ್ಧಗೊಳಿಸಿಕೊಳ್ಳಬೇಕಾದ ಸಮಯ ಇದೀಗ ಬಂದಿದೆ. ನಾವು ಎದುರಿಸಬೇಕಾದ ಗಂಭೀರವಾದ ಸವಾಲು ಇದು. ನಾವು ಈ ಸವಾಲಿಗೆ ಯಾವ ರೀತಿಯಲ್ಲಿ ಪ್ರತ್ಯುತ್ತರ ನೀಡುತ್ತೇವೆ ಎನ್ನುವುದರ ಮೇಲೆ ನಮ್ಮ ಭವಿತವ್ಯ ನಿಂತಿದೆ. ವಿನೀತಭಾವದಿಂದ, ಪಶ್ಚಾತ್ತಾಪದಗ್ಧ ಹೃದಯದಿಂದ ಭಗವಂತನನ್ನು ಪ್ರಾರ್ಥಿಸಿದಲ್ಲಿ ಈ ಹಿಂದೆ ನಮ್ಮ ಸಮಾಜವನ್ನು ಕಾಪಾಡಿದಂತೆ ಈ ಸಲವೂ ಅವನು ನಮ್ಮನ್ನು ಪಾರು ಮಾಡಿಯಾನೆಂದು ಹಾರೈಸುವಾ...."

ಈ ಸಂದರ್ಭದಲ್ಲಿ ನಮ್ಮ ಹಿಂದು ಜನಾಂಗದ ಎದುರಲ್ಲಿ ಕೆಲವೊಂದು ಪ್ರಶ್ನೆಗಳು ಉದ್ಭವಿಸದೆ ಇರಲಾರವು. ಪಾಶ್ಚಾತ್ಯ ಸಮಾಜದ ಈ ಕರಾಳ ಭಾಗ್ಯದೊಂದಿಗೆ ನಮ್ಮ ಸಮಾಜದ ಭವಿತವ್ಯವೂ ಗಟ್ಟಿಯಾಗಿ ಅಂಟಿ ಹೋಗಿದೆಯೇ ? ನಮ್ಮ ಜನಾಂಗದ ಸ್ವಂತಿಕೆಯ ಚೈತನ್ಯ ಇಷ್ಟೊಂದು ಪೂರ್ತಿಯಾಗಿ ಉದುಗಿಹೋಗಿದೆಯೆ ? ಆಂತರಿಕ ವಿಸ್ಫೋಟದ ದವಡೆಯಲ್ಲಿ ಸಿಲುಕಿರುವ ಮಾನವ ಸಮಾಜಕ್ಕೆ ಹಿಂದು ಜೀವನದರ್ಶನವು ಆತ್ಮೋದ್ಧಾರದ ಹಾದಿ ತೋರಬಲ್ಲದು ಎಂದು ಉದ್ಘೋಷಿಸಿದ ಸ್ವಾಮಿ ವಿವೇಕಾನಂದ, ಯೋಗಿ ಅರವಿಂದರಂತಹ ಭಾರತದ ಮಹಾ ದಾರ್ಶನಿಕರ ಮಾತು ಕೇವಲ ಪೊಳ್ಳು ಬಡಾಯಿಯಾಗಿ ಉಳಿದಿದೆಯೇ ?

ಈ ಎಲ್ಲ ಪ್ರಶ್ನೆಗಳಿಗೆ ಉತ್ತರ ಹುಡುಕುವ ಮುನ್ನ ಟಾಯನ್‌ಬೀಯ ಸಮಾಜ ವಿಕಾಸದ ಕುರಿತಾದ ಸಿದ್ಧಾಂತ ಏನು ಎಂಬುದನ್ನು ನಾವು ಅರ್ಥಮಾಡಿಕೊಳ್ಳಬೇಕು.

**ಸೃಜನಶೀಲತೆಯ ವ್ಯಕ್ತಿ : ಪರಿವರ್ತನೆಯ ಮೂಲಶಕ್ತಿ :** ಟಾಯನ್‌ಬೀಯ ಗ್ರಂಥದ 11ನೆಯ ಅಧ್ಯಾಯದಲ್ಲಿ ಈ ವಿಷಯ ಬರುತ್ತದೆ. ಅದರ ಶೀರ್ಷಿಕೆ–"ಬೆಳವಣಿಗೆಯ ಮೀಮಾಂಸೆ" ಅದರಲ್ಲಿ 1ನೇ ಭಾಗ 'ಸಮಾಜ ಮತ್ತು ವ್ಯಕ್ತಿ'. ಅದರ ಸಾರಾಂಶ ಇಷ್ಟು : ಸಮಾಜ ಎಂದರೆ ವ್ಯಕ್ತಿಗಳ ನಡುವಣ ಪರಸ್ಪರ ಸಂಬಂಧಗಳ ವ್ಯವಸ್ಥೆ ; ಮಾನವ ಜೀವಿಗಳು ಇತರೆ ಮಾನವ ಜೀವಿಗಳೊಂದಿಗೆ ಹೊಂದಿಕೊಂಡು ವ್ಯವಹರಿಸದೆ ಹೋದಲ್ಲಿ ಅವರು ಮಾನವರಾಗಿ ಉಳಿಯಲಾರರು. ಸಮಾಜ ಎಂದರೆ ಅನೇಕ ಮಾನವಜೀವಿಗಳಿಗೆ ಮೀಸಲಾಗಿರುವ ಒಂದು ವಿಶಿಷ್ಟ ಕ್ರಿಯಾಕ್ಷೇತ್ರ. ಆದರೆ ಕ್ರಿಯೆಯ ಉಗಮ ಇರುವುದು ವ್ಯಕ್ತಿಗಳಲ್ಲಿ. ಎಲ್ಲ ರೀತಿಯ ಬೆಳವಣಿಗೆಗೂ ಸೃಜನಶೀಲ ವ್ಯಕ್ತಿಗಳ, ಅಥವಾ ಅಲ್ಪ ಸಂಖ್ಯೆಯಲ್ಲಿರುವ ಅಂತಹ ವ್ಯಕ್ತಿಗಳ ಸಮೂಹಗಳೇ,

ತಾಯಿ ಬೇರು. ಅಂತಹವರ ಕಾರ್ಯಕ್ಕೆ ಎರಡು ಮುಖ. ಒಂದು: ತಮ್ಮ ಸ್ಫೂರ್ತಿಯ ಚಿಲುಮೆ ಅಥವಾ ನವಸಂಶೋಧನೆಗಳನ್ನು ಅವರು ಸ್ವತಃ ಕಂಡುಕೊಳ್ಳುವುದು. ಎರಡು: ತಾವು ಕಂಡುಕೊಂಡ ಆ ಹೊಸ ಜೀವನ ವಿಧಾನಕ್ಕೆ ತಕ್ಕಂತೆ ತಮ್ಮ ತಾಯಿ ಸಮಾಜವನ್ನೂ ಪರಿವರ್ತಿಸುವುದು. ಈ ಬಗೆಯ ಸಾಮಾಜಿಕ ಪರಿವರ್ತನೆ ಎರಡು ರೀತಿಯಲ್ಲಿ ಬರಬಹುದು. ಒಂದು: ಸೃಜನಾತ್ಮಕ ವ್ಯಕ್ತಿಗಳ ಪರಿವರ್ತನೆಗೆ ಕಾರಣವಾದ ಅವರ ಪ್ರತ್ಯಕ್ಷ ಅನುಭವವೇ ಸರ್ವಸಾಮಾನ್ಯರಿಗೂ ಬರುವುದರಿಂದ. ಎರಡು: ಆ ಅನುಭವದ ಹೊರ ಪದ್ಧತಿಗಳನ್ನು ಅನುಕರಿಸುವುದರಿಂದ. ವ್ಯಾವಹಾರಿಕವಾಗಿ ನೋಡಿದಲ್ಲಿ, ಮಾನವ ಜನಾಂಗದ ಒಂದು ಸಣ್ಣ ಅಲ್ಪಸಂಖ್ಯಾತ ಸಮೂಹವನ್ನು ಬಿಟ್ಟಲ್ಲಿ ಉಳಿದೆಲ್ಲರಿಗೂ ಈ ಎರಡನೆಯ ಮಾರ್ಗವೊಂದೇ ತೆರದಿರುವುದು. ಅನುಕರಣೆ ಒಂದು ಸುಲಭದ ಹಾದಿ. ಸಾಮಾನ್ಯ ಶ್ರೇಣಿಯವರು ಒಟ್ಟೊಟ್ಟಾಗಿ ತಮ್ಮ ನಾಯಕರನ್ನು ಅನುಸರಿಸಬಹುದಾದ ಹಾದಿ ಇದೊಂದೇ. ಒಂದು ಸಮಾಜಕ್ಕೆ ಬಾಹ್ಯ ಕಾರಣಗಳಿಂದಾಗಲಿ (ಉದಾ: ಭೌಗೋಲಿಕ ಸನ್ನಿವೇಶ, ಪರಕೀಯ ಜನಾಂಗಗಳ ಆಕ್ರಮಣ) ಆಂತರಿಕ ಕಾರಣಗಳಿಂದಾಗಲಿ (ಉದಾ: ಸಾಮಾಜಿಕ ಮೌಲ್ಯಗಳಲ್ಲಿ, ವ್ಯವಸ್ಥೆಗಳಲ್ಲಿ ಆಗುವ ಅಧಃಪತನ) ಸವಾಲುಗಳು ಬಂದೆರಗಿದಾಗ ಆ ಸವಾಲುಗಳಿಗೆ ಅದು ಯಾವ ರೀತಿಯಲ್ಲಿ ಪ್ರತ್ಯುತ್ತರ ನೀಡುತ್ತದೆ ಎನ್ನುವುದರ ಮೇಲೆ ಆ ಸಮಾಜದ ಅಳಿವೂ ಉಳಿವೂ ನಿಂತಿದೆ. ಈ ರೀತಿ ಸವಾಲುಗಳನ್ನು ಎದುರಿಸುವ ಕಸುವು ಅದಕ್ಕೆ ತನ್ನಲ್ಲಿನ ಸೃಜನಶೀಲ ವ್ಯಕ್ತಿಗಳಿಂದ ಲಭಿಸುತ್ತದೆ. ಅಂತಹ ವ್ಯಕ್ತಿಗಳ, ವ್ಯಕ್ತಿ ಸಮೂಹಗಳ ಸೃಜನಶೀಲತೆ ಅರಳುವುದು "ನಿವೃತ್ತಿ" (Withdrawal)ಮತ್ತು "ಪ್ರವೃತ್ತಿ" (Return) ಪ್ರಕ್ರಿಯೆಯಿಂದ.

"ನಿವೃತ್ತಿ" ಎಂದರೆ ಸ್ವತಃ ತಾನು ಬೆಳಕನ್ನು ಕಂಡುಕೊಳ್ಳಲು ವ್ಯಕ್ತಿಯು ನಡೆಸುವ ಏಕಾಂತ ಸಾಧನೆ. ಬುದ್ಧನು ಅರಮನೆಯ ಸುಖ ಭೋಗಗಳಿಂದ ನಿವೃತ್ತನಾಗಿ ಕಾಡಿನಲ್ಲಿ ತಪೋನಿರತನಾದ ರೀತಿ, ಅದು. ಅನಂತರ ತಾನು ಕಂಡುಕೊಂಡ ಬೆಳಕನ್ನು ಜಗತ್ತಿಗೆ ಬೋಧಿಸಲು ಹೊರಬಿದ್ದಾಗ, ಬುದ್ಧನಾದಾಗ, ಅದು "ಪ್ರವೃತ್ತಿ". ಗ್ರಂಥದಲ್ಲಿನ ಉದಾಹರಣೆಗೆ ಪೋಷಕವಾಗಿ ಇನ್ನೂ ಕೆಲವು ದೃಷ್ಟಾಂತಗಳನ್ನು ಇಲ್ಲಿ ನಾವು ಕಣ್ಮುಂದೆ ತಂದುಕೊಳ್ಳಬಹುದು. ಒಂದು ಕಂಬಳಿಹುಳು ಕೋಶಾವಸ್ಥೆಯಲ್ಲಿದಾಗ ಅದು "ನಿವೃತ್ತಿ"ಯ ಸ್ಥಿತಿ. ಚಿಟ್ಟೆಯಾಗಿ ಹೊರಜಗತ್ತಿನಲ್ಲಿ ತನ್ನ ಸೌಂದರ್ಯದೊಂದಿಗೆ ಹಾರಿ ಬಂದಾಗ ಅದು "ಪ್ರವೃತ್ತಿ". ಬ್ಯಾಟರಿಯನ್ನು ಛಾರ್ಜ್ ಮಾಡಲುಇಟ್ಟಿದ್ದಾಗ ಅದು "ನಿವೃತ್ತಿ". ಅದರಲ್ಲಿನ ವಿದ್ಯುತ್ ಶಕ್ತಿ ಕಡಿಮೆ ಆದಾಗ ಮತ್ತೆ ಅದನ್ನು ಛಾರ್ಜಿಂಗಿಗೆ— "ನಿವೃತ್ತಿ"ಗೆ ಹಾಕಬೇಕು.



ಸೃಜನಶೀಲ ವ್ಯಕ್ತಿಗಳ ಸೃಜನಶಕ್ತಿಯು ನಿಂತ ನೀರಾಗದೆ ಸದಾ ಮುಂದೆ ಹರಿಯುತ್ತಾ ತನ್ನೊಂದಿಗೆ ಸಮಾಜವನ್ನು ಮುಂದು ಮುಂದಕ್ಕೆ ನಡೆಸುತ್ತಾ ಹೋಗಬೇಕಾದರೆ ಈ ರೀತಿಯ "ನಿವೃತ್ತಿ" "ಪ್ರವೃತ್ತಿ" ಗಳ ಪ್ರಕ್ರಿಯೆ ಅನಿವಾರ್ಯ, ಎನ್ನುತ್ತಾನೆ ಟಾಯನ್‌ಬೀ.

## ಸಿದ್ಧತೆಯ ಅವಧಿ

ಈ ನಿಟ್ಟಿನಲ್ಲಿ ಪ್ರಾಚೀನ ಹಿಂದು ಚಿಂತನೆ ಯಾವ ರೀತಿ ಹರಿದಿದೆ?— ಎಂಬುದನ್ನು ನಾವೀಗ ಗಮನಿಸಬೇಕಾಗಿದೆ. ಓರ್ವ ಹಿಂದು ವ್ಯಕ್ತಿಯು ಜನಿಸಿದ ನಂತರ ಅವನ ಜೀವನವಿಕಾಸಕ್ಕೆ ಅದು ಒಂದು ವಿಶಿಷ್ಟ ಕ್ರಮವನ್ನು ರೂಪಿಸಿದೆ. ಬಾಲ್ಯದಲ್ಲಿ ಅವನಿಗೆ ಬ್ರಹ್ಮಚರ್ಯದ ವ್ರತ. ಅದೊಂದು ಬಗೆಯ "ನಿವೃತ್ತಿ". ಸ್ವಯಂ ಸಿದ್ಧತೆಯ ಅವಧಿ. 'ಸಂಸಾರ ಸಾಗರ'ದಲ್ಲಿ ಧುಮುಕುವ ಮುನ್ನ ಅದರಲ್ಲಿ ತನ್ನ ಪಾತ್ರವನ್ನು ಪ್ರಭಾವಿಯಾಗಿ ನಿರ್ವಹಿಸಲು ಅಗತ್ಯವಾದ ಶಿಕ್ಷಣ ಪಡೆಯುವ ಅವಧಿ ಅದು. ಬದುಕಿನಲ್ಲಿ ತನ್ನ ಗೊತ್ತುಗುರಿಗಳನ್ನು ಕಂಡುಕೊಳ್ಳುವಂತಹ, ತನ್ನ ಬದುಕಿನ ಆಕೃತಿಯನ್ನು ರೂಪಿಸಿಕೊಳ್ಳುವಂತಹ ಅವಧಿ. ತಾನು ತುಳಿಯಬೇಕಾದ ಹಾದಿಯಲ್ಲಿನ ಅಡಚಣೆಗಳನ್ನು ನಿವಾರಿಸಿಕೊಂಡು ಮುನ್ನಡೆಗೆ ಅವಶ್ಯ ಎನಿಸುವಂತಹ ನೀತಿ ನಿಷ್ಠೆಗಳನ್ನು ಮೈಗೂಡಿಸಿಕೊಳ್ಳುವ ಸಾಧನೆಯೂ ಅವಕಾಶ. ಜೀವನದ ಪರಮಗುರಿ ಎಂದರೆ ಬ್ರಹ್ಮತ್ವದ ಸಿದ್ಧಿ. ಅದೇ ಪರಮ ಆನಂದದ ಸ್ಥಿತಿ. ಚಿರಂತನ ಸೌಖ್ಯದ ನೆಲೆ. ಆ ಗುರಿಯ ದೀಕ್ಷೆ ತೊಡುವ ಪರ್ವ ಅದು. ಎಂದೇ ಅದಕ್ಕೆ ಬ್ರಹ್ಮಚರ್ಯ ಎನ್ನುವ ಹೆಸರು. ಮಾನವ ಜೀವನದ 'ಬ್ಯಾಟರಿ'ಗೆ ಮೂಲಭೂತ ಮಾನವೀಯ ಮೌಲ್ಯಗಳ ನಿಷ್ಠೆಗಳಿಂದ 'ಛಾರ್ಜ್' ಮಾಡಿಸುವ 'ನಿವೃತ್ತಿ'ಯ ಸ್ಥಿತಿ.

## ಅಭಿವ್ಯಕ್ತಿಯ ಅವಧಿ

ಮುಂದಿನದು ಗೃಹಸ್ಥಾಶ್ರಮ. 'ಪ್ರವೃತ್ತಿ'ಯ ಹಂತ. ಗೃಹಸ್ಥನಾದವನು ಸ್ವಂತದ, ಸಂಸಾರದ ಸುಖ-ಸಂತೋಷಗಳನ್ನು ಸವಿಯುವುದಷ್ಟೆ ಅಲ, ಸುತ್ತಮುತ್ತ ಸಮಾಜದ ಕುರಿತಾಗಿಯು ಅವನು ಕಾಳಜಿ ವಹಿಸುವನು. ಪರೋಪಕಾರ, ಸಹಕಾರ, ಸೇವೆ, ವಿದ್ಯಾದಾನಗಳಂತಹ ಹಲವು ರೀತಿಗಳಿಂದ ಆ ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸುವನು. ಸಮಾಜದ ಆಗುಹೋಗುಗಳಲ್ಲಿ ಪೂರ್ತಿಯಾಗಿ ಬೆರತು ಅದನ್ನು ಸುಖಿಯಾಗಿ, ಸಮೃದ್ಧವಾಗಿ, ಸುಸಂಸ್ಕೃತವಾಗಿ ಮಾಡಲು ತನ್ನ ಶಕ್ತಿ, ಗುಣಸಂಪತ್ತುಗಳನ್ನು ಸವೆಸುವನು. ತನ್ನ ಸ್ವಂತದ ಸುಖ ಸಂತೋಷಗಳನ್ನು ಅನುಭವಿಸುವ ಜೊತೆಗೆ ಸಾಮಾಜಿಕ ಕರ್ತವ್ಯದ ಋಣವನ್ನೂ ಅವನು ತೀರಿಸುವನು. ವ್ಯಕ್ತಿಜೀವನದ ನಡುಹಗಲಿನ ಕಾಲ ಇದು. ಗೃಹಸ್ಥಾಶ್ರಮ. ಈ

ಮಾತು ಪುರಷನಿಗೆ ಅನ್ವಯಿಸುವಷ್ಟೆ ಸ್ತ್ರೀಗೂ ಅನ್ವಯಿಸುತ್ತದೆ. ಬಹುಶಃ ಇನ್ನು ಒಂದು ತೂಕ ಹೆಚ್ಚಾಗಿಯೇ. ಎಂದೇ, ಧನ್ಯೋಗೃಹಾಸ್ಥಾಶ್ರಮಃ'' ಎಂದಿದ್ದಾರೆ, ಹಿಂದು ಶಾಸ್ತ್ರಕಾರರು.

**ಮುಂದಿನ ಸಿದ್ಧತೆ :** ಅಲ್ಲಿಂದಾಚೆಗೆ ವ್ಯಕ್ತಿಯು ಮುಂದಿನ ತನ್ನ ಪಾತ್ರಕ್ಕೆ ಸಿದ್ಧತೆ ನಡೆಸುವನು. ಅದಕ್ಕಾಗಿ ಮತ್ತೆ ''ನಿವೃತ್ತಿ''. ಅದೇ ವಾನಪ್ರಸ್ಥ. (ವಾನಪ್ರಸ್ಥ ಎಂದರೆ ಹಿಂದಿನ ಕಾಲದಲ್ಲಿ ಕಾಡಿಗೆ ತೆರಳುವುದು ಎನ್ನುವ ಅರ್ಥ ಇತ್ತು. ಆದರೆ ಇಂದಿಗೂ ಶಬ್ದಶಃ ಅದೇ ರೀತಿ ಅರ್ಥಮಾಡಿಕೊಳ್ಳುವ ಅಗತ್ಯ ವೇನೂ ಇಲ್ಲ. ಒಳಗಿನ ಉದ್ದೇಶ, ಭಾವ ಉಳಿಸಿಕೊಂಡರೆ ಸಾಕು.) ಸಂಸಾರದ ಸುಖಭೋಗಗಳನ್ನೆಲ್ಲ ಸವಿದು, ಆ ಘಟ್ಟದಲ್ಲಿ ಸಾಧಿಸಬೇಕಾದ ಜೀವನು-ವಿಕಾಸ ವನ್ನು ಸಾಧಿಸಿದ ನಂತರದ ಘಟ್ಟ ಇದು. ಐಹಿಕ ಸುಖಭೋಗಗಳ ಸೆಳವನ್ನು ತಗ್ಗಿಸಿಕೊಂಡು ಅದಕ್ಕಿಂತ ಗಾಢವಾದ ಆಧ್ಯಾತ್ಮಿಕ ಸುಖವನ್ನು ಕಂಡುಕೊಳ್ಳಲು ಯತ್ನಿಸುವ ಹಂತ ಇದು. ತನ್ನ ಮೂಲ ಆತ್ಮ ಚಿಂತನದ ನೆಲೆಯಲ್ಲಿ ನಿಂತು ಜಗತ್ತಿನಲ್ಲಿ ಮುಕ್ತವಾಗಿ ವಿವರಿಸಲು ಬೇಕಾದ ಶಕ್ತಿಯನ್ನು ಸಂಗ್ರಹಿಸಿಕೊಳ್ಳಲು ಮಾಡಿಕೊಳ್ಳುವ ತಯಾರಿಯ ಹಂತ. ತನ್ನ ಜೀವನದ ಪರಮೋಚ್ಚ ಸಿದ್ಧಿಗೆ ಬೇಕಾಗುವ ಆತ್ಮಶಕ್ತಿಯನ್ನು ಕೂಡಿಸಿಕೊಳ್ಳುವ ಸಾಧನಾ ಹಂತ. ತನ್ನ ಪೂರ್ಣ ವಿಕಸಿತ ಸ್ಥಿತಿಯಲ್ಲಿ ರೆಕ್ಕೆ ಬಿಚ್ಚಿ ಜಗದಾಕಾಶದಲ್ಲಿ ಹಾರಾಡುವುದಕ್ಕೆ ಮುಂಚಿನ ಕೋಶಾವಸ್ಥೆ. ತನ್ನ ಆತ್ಮದ ಬ್ಯಾಟರಿಯನ್ನು ಛಾರ್ಜ್ ಮಾಡಿಕೊಳ್ಳುವ ಸ್ಥಿತಿ.

**ವಿಕಾಸದ ಕೊನೆಯ ಹಂತ:** ಮುಂದಿನ ಮತ್ತು ಕೊನೆಯ ಹಂತವೇ ಸಂನ್ಯಾಸ. ಮನುಷ್ಯನ ವ್ಯಕ್ತಿತ್ವವು ಪೂರ್ಣವಾಗಿ ಅರಳಿ ತನ್ನ ಸುತ್ತೆಲ್ಲ ಸೌರಭ ಬೀರುವ ಮುಕ್ತಸ್ಥಿತಿ, ''ಪ್ರವೃತ್ತಿಯ'' ಪೂರ್ಣವೈಭವದ ಅವಸ್ಥೆ ಹಿಂದಿನ ವಾನಪ್ರಸ್ಥದ ಹಂತದಲ್ಲಿ ಸಿದ್ಧಿಸಿಕೊಂಡ ಶಕ್ತಿಯನ್ನು ಜಗತ್ತಿನಲ್ಲಿ ಅಭಿವ್ಯಕ್ತಗೊಳಿಸುವ ಸ್ಥಿತಿ. ಛಾರ್ಜ್ ಆದ ಬ್ಯಾಟರಿಯಿಂದ ಸುತ್ತೆಲ್ಲ ಪ್ರಕಾಶವನ್ನು ಚೆಲ್ಲುವ ಪ್ರಭಾವಪೂರ್ಣ ಪಾತ್ರ. ಈಗ ಅವನ ಬದುಕು ಸಕಲ ಜೀವಸೃಷ್ಟಿಯ ಹಿತಕ್ಕಾಗಿಯೇ ಮುಡುಪು ದಯೆ, ಅಹಿಂಸೆ ಪರೋಪಕಾರಗಳ ಮೂರ್ತಿವೆತ್ತ ರೂಪ ಅವನು. ಸಮಾಜದಿಂದ ಅತ್ಯಲ್ಪವನ್ನು ಮಾತ್ರ ಸ್ವೀಕರಿಸಿ ಅದಕ್ಕೆ ತನ್ನ ಸರ್ವಸ್ವವನ್ನು ಅರ್ಪಿಸುವ ತ್ಯಾಗ ಸಮರ್ಪಣೆಗಳ ಉಜ್ವಲ ಪ್ರತೀಕ. ''ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ'' —ಇದು ಸಂನ್ಯಾಸಿಯ ಪರಮೋಚ್ಚ ಸಿದ್ಧಿ. ಹಿಂದು ಜೀವನ ದರ್ಶನದ ಐಹಿಕ-ಪಾರಮಾರ್ಥಿಕ ಸಿದ್ಧಿಗಳ ಸುಂದರ ಸಮನ್ವಯ ಇದು. ಆತ್ಮನೋ ಮೋಕ್ಷಾರ್ಥಂ- ಇದು ''ನಿವೃತ್ತಿ''ಯ ಮುಖ. ಜಗದ್ಧಿತಾಯ ಚ- ಇದು ''ಪ್ರವೃತ್ತಿಯ'' ಮುಖ. ಮಾನವ ಜೀವನದ ಎರಡು ವಿಭಿನ್ನ ಮುಖಗಳು ಇವು, ನಾಣ್ಯದ ಎರಡು ಮುಖಗಳಿದ್ದಂತೆ. ಯಾವ ಒಂದು ಮುಖ ಸವೆದು ಹೋದರು



ಅದಕ್ಕೆ ಬೆಲೆ ಇಲ್ಲ. 'ನಿವೃತ್ತಿ', 'ಪ್ರವೃತ್ತಿ' ಗಳೆರಡೂ ಮೇಳವಿಸಿ, ವ್ಯಕ್ತಿತ್ವ ಅರಳಿದಾಗಲೇ ಅದು ಪರಿಪೂರ್ಣ, ಸಮಾಜಕ್ಕೂ ಸ್ಫೂರ್ತಿದಾಯಕ, ಶಕ್ತಿದಾಯಕ. ಇದು ಪ್ರತಿಯೊಬ್ಬ ಮಾನವನಿಗೆ ಒಂದು ದರ್ಶನ ಹಾಕಿಕೊಟ್ಟಿರುವ ಜೀವನದ ವಿಕಾಸ ಕ್ರಮ.

**ಸಾಮಾನ್ಯರಿಗೂ ತೆರೆದಿಟ್ಟ ಬಾಗಿಲು :** ಅರ್ನಾಲ್ಡ್ ಟಾಯನ್‌ಬೀ ಹೇಳಿರುವ ವಿಕಾಸ ಕ್ರಮದ ತತ್ವವೂ ಇದೇ: ನಿವೃತ್ತಿ-ಪ್ರವೃತಿ-ನಿವೃತ್ತಿ-ಪ್ರವೃತ್ತಿ. ಸಮಾಜದಲ್ಲಿನ ಕೆಲವು ಸೃಜನಶೀಲ ವ್ಯಕ್ತಿಗಳಿಗೆ, ಚಿಕ್ಕ ವ್ಯಕ್ತಿಸಮೂಹಗಳಿಗೆ ಮಾತ್ರ ಈ ಬಗೆಯ ವಿಕಾಸಕ್ರಮ ಸಾಧ್ಯ. ಉಳಿದೆಲ್ಲ ಜನಸಾಮಾನ್ಯರೂ ಕೇವಲ ಅವರ ಅನುಕರಣೆ ಮಾತ್ರ ಮಾಡಬಲ್ಲರು—ಎಂದಿದ್ದಾನೆ ಟಾಯನ್‌ಬೀ. ಆದರೆ ಮೇಲಿನ ಹಿಂದೂ ಜೀವನ ಪರಂಪರೆಯಲ್ಲಿ ಸರ್ವಸಾಮಾನ್ಯ ವ್ಯಕ್ತಿಗಳೂ ಸಹ ತಂತಮ್ಮ ಶಕ್ತ್ಯನುಸಾರ ಜೀವನದ ವಿಕಾಸಕ್ರಮದಲ್ಲಿ ಪಾಲುಗೊಳ್ಳಬಲ್ಲರು. ಸಮಾಜಕ್ಕೆ ಮೇಲ್ಪಂಕ್ತಿ ಹಾಕುವ ಸೃಜನಶೀಲರನ್ನು ಅವರು ಯಾಂತ್ರಿಕವಾಗಿ ಅನುಕರಣೆ ಮಾಡುವದಷ್ಟೇ ಅಲ್ಲ, ತಮ್ಮ ಆತ್ಮ ವಿಕಾಸಕ್ಕೆ ಪ್ರಯತ್ನದ ಬಾಗಿಲನ್ನೂ ಅವರಿಗೆ ಹಿಂದು ದರ್ಶನ ತೆರೆದಿಟ್ಟಿದೆ.

**ವಿಕಾಸಕ್ಕೆ ಇರುವ ವಿಘ್ನಗಳು :** ಗ್ರಂಥದ ೧೬ನೆಯ ಅಧ್ಯಾಯದಲ್ಲಿ ಸಮಾಜಗಳ ಬೆಳವಣಿಗೆಯ ಪ್ರಕ್ರಿಯೆಗೆ ವಿಘ್ನಗಳು ಯಾವ ರೀತಿ ಒದಗುವುದೆಂಬುದನ್ನು 'ಸ್ವಯಂ ನಿರ್ಣಯದ ಪರಾಭವ' ಎನ್ನುವ ಶೀರ್ಷಿಕೆಯಲ್ಲಿ ಟಾಯನ್‌ಬೀ ಪ್ರಭಾವಿಯಾಗಿ ವರ್ಣಿಸಿದ್ದಾನೆ. ಅದರ ಸಾರ ಇಷ್ಟು :

ಸೃಜನಶೀಲವಲ್ಲದ ಬಹುಸಂಖ್ಯಾತ ಸಮೂಹವು ಸೃಜನಶೀಲ ನಾಯಕರ ನೇತೃತ್ವವನ್ನು ಅನುಸರಿಸಲು ಭೌತಿಕ ಅನುಕರಣೆಯೊಂದೇ ಇರುವ ದಾರಿ. ಇದು ಒಂದು ಬಗೆಯ ವ್ಯಾಯಾಮ(ಡ್ರಿಲ್) ಇದ್ದಂತೆ. ಸೃಜನಶೀಲರ ಆ ಮಹತ್ತರವಾದ ಸ್ವಯಂಸ್ಫೂರ್ತವಾದ ಮೂಲ ವಿಚಾರಗಳ ಯಾಂತ್ರಿಕವಾದ ಬಾಹ್ಯಾನುಕರಣೆ ಅದು. ಪ್ರಗತಿಯ ಈ ಅನಿವಾರ್ಯವಾದ 'ಸುಲಭದ ಹಾದಿ'ಯಲ್ಲಿ ಅಪಾಯಗಳಿರುವುದು ಸುಸ್ಪಷ್ಟ. ತಮ್ಮ ಅನುಯಾಯಿಗಳ ಯಾಂತ್ರಿಕತೆಗೇ ನಾಯಕರೂ ತುತ್ತಾಗಬಹುದು. ಇದರ ಪರಿಣಾಮವಾಗಿ ನಾಗರಿಕತೆ ನಿಂತಲ್ಲೇ ನಿಲ್ಲುತ್ತದೆ. ಅಥವಾ ನಾಯಕರು ತಾಳ್ಮೆಗೆಟ್ಟು ಚಾವಟಿಯನ್ನು ಕೈಗೆತ್ತಿಕೊಳ್ಳಬಹುದು. ಆಗ ಸೃಜನಶೀಲ ಅಲ್ಪ ಸಂಖ್ಯಾತರು ದಮನಶೀಲ ಅಲ್ಪ ಸಂಖ್ಯಾತರಾಗುವರು ಅವರ 'ಶಿಷ್ಯರು' ಒಲ್ಲದ ಮನಸ್ಸಿಗರಾಗಿ, ಸಿಡಿದುನಿಂತ 'ಶ್ರಮಜೀವಿ'ಗಳಾಗುತ್ತಾರೆ. ಇದು ಸಂಭವಿಸಿದಾಗ ಸಮಾಜವು ಭಗ್ನಗೊಳ್ಳುವ ಹಾದಿ ಹಿಡಿಯುತ್ತದೆ. ತನ್ನ ಮುನ್ನಡೆಯ ಹಾದಿಯನ್ನು ಗೊತ್ತುಪಡಿಸಿಕೊಳ್ಳಲು ಬೇಕಾದ ಸ್ವಯಂನಿರ್ಣಯದ ಸಾಮರ್ಥ್ಯವನ್ನು ಕಳೆದು ಕೊಳ್ಳುತ್ತದೆ.

**ಸಾಮಾನ್ಯನೂ ಅಸಾಮಾನ್ಯನಾಗಬಲ್ಲ :** ಬಹುಸಂಖ್ಯಾತ ಜನಸಮೂಹಕ್ಕೆ ನಾಯಕರ ಕುರುಡು ಅನುಕರಣೆ ಮಾಡುವುದು ಬಿಟ್ಟು ಬೇರೆ ಗತಿಯಿಲ್ಲ, ಎನ್ನುವ ಮೂಲ ಸಿದ್ಧಾಂತವನ್ನು ಹಿಂದುದರ್ಶನ ನಿರಾಕರಿಸುತ್ತದೆ. ಸಮಾಜದಲ್ಲಿನ ಬೇರೆಬೇರೆ ವ್ಯಕ್ತಿಗಳಲ್ಲಿ ಸ್ವಯಂಪ್ರಜ್ಞೆ, ಸೃಜನಶೀಲತೆಗಳ ಅಭಿವ್ಯಕ್ತಿಗಳಲ್ಲಿ ಹೆಚ್ಚು ಕಡಿಮೆ ಇರಬಹುದು. ಆದರೆ ಸಕಲ ಮಾನವರಲ್ಲಿಯೂ ಆತ್ಮನ ಚೈತನ್ಯ ಇದ್ದೇ ಇದೆ. 'ನರ ಕರನೀ ಕರೇತೋ ನಾರಾಯಣ ಬನ್ ಜಾಯ್'- ಮಾನವನು ಸಾಧನೆ ನಡೆಸಿದಲ್ಲಿ ದೇವನಾಗಬಲ್ಲ-ಇದು ನಮ್ಮ ಮೂಲ ನಂಬಿಕೆ, 'ಮಾನವ ಮೂಲತಃ ಪಾಪದಕೂಸು, ಯೇಸು ಒಬ್ಬನೇ ದೇವರ ಪುತ್ರ' ಎನ್ನುವ ಕ್ರೈಸ್ತ ನಂಬಿಕೆ ನಮಗೆ ಮಾನ್ಯವಿಲ್ಲ. ಸಕಲ ಮಾನವರೂ ದೇವರ ಪುತ್ರರೇ, ಅವರು ಅದನ್ನು ಕಂಡುಕೊಳ್ಳಲು ಅವಕಾಶ ಒದಗಿಸಿಕೊಡಬೇಕು ಅಷ್ಟೆ. ಮಾನವ ತನ್ನಲ್ಲಿರುವ ದಿವ್ಯತೆಯನ್ನು ಅಭಿವ್ಯಕ್ತಗೊಳಿಸುವುದೇ ನಿಜವಾದ ಧರ್ಮ, ಎಂದಿದ್ದಾರೆ ಸ್ವಾಮಿ ವಿವೇಕಾನಂದರು.

**ಆತ್ಮದ ಅರಿವೇ ಮೂಲಪ್ರೇರಣೆ :** ಇನ್ನು ಸೃಜನಶೀಲ ವ್ಯಕ್ತಿಗಳು ತಮ್ಮ ಸ್ವಪ್ರತಿಭೆ ಕಳೆದುಕೊಂಡಾಗ ಜನಸಾಮಾನ್ಯರ ಮೇಲೆ ಅವರು ದಮನಚಕ್ರ ಹರಿಸುವಂತಾಗುವರು ಎನ್ನುವ ಮಾತು. ಸೃಜನಶೀಲತೆಯ ಗುಣ ಕೆಲವು ವ್ಯಕ್ತಿಗಳಲ್ಲಿ, ಅಲ್ಪಸಂಖ್ಯಾತ ವ್ಯಕ್ತಿ ಸಮೂಹಗಳಲ್ಲಿ, ಹೇಗೆ, ಏಕೆ ವ್ಯಕ್ತಗೊಳ್ಳುತ್ತದೆ ? ಇದರ ವಿಶ್ಲೇಷಣೆ ಟಾಯನ್ ಬೀ ಗ್ರಂಥದಲ್ಲಿ ಕಂಡುಬರುವುದಿಲ್ಲ. ಹಿಂದು ದರ್ಶನದಲ್ಲಿ ಇದಕ್ಕೆ ವಿವರಣೆ ಇದೆ.

ಪ್ರತಿಯೊಂದು ಜೀವಿಯಲ್ಲಿಯೂ ಆತ್ಮದ ದಿವ್ಯತೆ ಇದೆ. ಆ ದಿವ್ಯತೆಯ ಅರಿವೂ ಮಾನವನಲ್ಲಿ ಮೂಡಬಲ್ಲುದು. ಅವನು ಆ ಅರಿವನ್ನು ತನ್ನೊಳಗೆ ಎಷ್ಟೆಷ್ಟು ತೀವ್ರಗೊಳಿಸಿಕೊಳ್ಳುವನೋ ಅಷ್ಟಷ್ಟು ಅವನಲ್ಲಿನ ಸುಪ್ತ ದಿವ್ಯತೆ ವ್ಯಕ್ತಗೊಳ್ಳುತ್ತದೆ. ಅವನ ಸೃಜನಶೀಲ ಪ್ರತಿಭೆ ಅರಳುತ್ತದೆ. ಈ ರೀತಿ ಯಾವ ಮಾನವನು ನಿರಂತರವಾಗಿ ತನ್ನ ಆತ್ಮಸಾಧನೆಯಲ್ಲಿ ತೊಡಗಿರುವನೋ ಅವನಲ್ಲಿನ ಸೃಜನ ಚೇತನವೂ ನಿರಂತರವಾಗಿ ಪ್ರಕಾಶಕ್ಕೆ ಬರತ್ತಾ ಹೋಗುತ್ತದೆ. ಆದ್ದರಿಂದ 'ಆತ್ಮನೋ ಮೋಕ್ಷಾರ್ಥಂ' ಎನ್ನುವ ಗುರಿಯುಳ್ಳ ಜೀವನು ಎಂದಿಗೂ ಸ್ವಪ್ರತಿಭೆ ಕಳೆದುಕೊಳ್ಳಲಾರ. ಯಾಂತ್ರಿಕಜೀವಿ ಆಗಲಾರ. ಜನರ ಮೇಲೆ ತನ್ನ ವರ್ಚಸ್ಸನ್ನು ಉಳಿಸಿಕೊಳ್ಳಲು ದಬ್ಬಾಳಿಕೆಯ ಹಾದಿ ಹಿಡಿಯಲಾರ.

**ದಮನ ಪ್ರವೃತ್ತಿಗೆ ಮದ್ದು :** ಇನ್ನೊಂದು ಕಾರಣಕ್ಕಾಗಿಯೂ ಅಂತಹ ವ್ಯಕ್ತಿಯಲ್ಲಿ ದಮನಕಾರಿ ಪ್ರವೃತ್ತಿ ಬೆಳೆಯಲಾರದು. ಆತ್ಮದ ಅರಿವು ಜಾಗೃತವಾಗಿರುವ ಮನುಷ್ಯ ಇತರರಲ್ಲಿಯೂ ಅದೇ ಆತ್ಮದ ದರ್ಶನ ಮಾಡುವನು. 'ಆತ್ಮವತ್ ಸರ್ವ ಭೂತೇಷು' 'ಸರ್ವಭೂತಹಿತೇ ರತಃ'- ಎಲ್ಲ ಜೀವಿಗಳನ್ನೂ ತನ್ನಂತೆಯೇ





ಕಾಣುವುದು, ಎಲ್ಲ ಜೀವಿಗಳ ಹಿತಸಾಧನೆಯಲ್ಲಿ ತನ್ಮಯವಾಗುವುದು, ಅಂತಹವನ ಸ್ವಭಾವ ಆಗುತ್ತದೆ. 'ಸರ್ವೇऽಪಿ ಸುಖಿನಸ್ಸಂತು ಸರ್ವೇ ಸಂತು ನಿರಾಮಯಾಃ' ಇದೇ ಅವನ ನಿತ್ಯದ ಪ್ರಾರ್ಥನೆಯಾಗುತ್ತದೆ. ಏಕೆಂದರೆ ಆತ್ಮದ ಸ್ವರೂಪವೇ ಅದು. ಅದು ಸರ್ವಾಂತರ್ಯಾಮಿ. ಎಲ್ಲ ಜೀವಿಗಳಲ್ಲಿ ಅಡಗಿರುವ ಆತ್ಮನೂ ಒಬ್ಬನೇ. (ಅವನಿಗೆ ಪರಮಾತ್ಮನೆಂದೂ ಕರೆಯುವರು) ಸರ್ವ ಜೀವರಲ್ಲಿಯೂ ತನ್ನ ಆತ್ಮದ ಬಿಂಬವನ್ನೆ ಕಾಣುವಂತಹವನು ಇತರರ ಮೇಲೆ ದಬ್ಬಾಳಿಕೆಯನ್ನು ನಡೆಸುವ ಮನೋಧರ್ಮವನ್ನು ಹೇಗೆ ತಾನೆ ಬೆಳೆಸಿಕೊಂಡಾನು?

ದಮನಕಾರೀ ವರ್ಗವೇ ಇಲ್ಲದ ಮೇಲೆ ಸಮಾಜದಲ್ಲಿ ತಿಕ್ಕಾಟ ಏರ್ಪಡದು. ಸಮಾಜವು ಆಂತರಿಕ ವಿಸ್ಫೋಟಕ್ಕೆ ತುತ್ತಾಗದು. ಅವನತಿಯ ಹಾದಿಯನ್ನು ಹಿಡಿಯದು.

**ಆಧ್ಯಾತ್ಮಿಕ ಕೊರತೆ ನೀಗಿಸಲು :** ಇಂದು 'ಏಕಮಾತ್ರ ಪ್ರಗತಿಶೀಲ ಸಮಾಜ'ವಾಗಿ ಉಳಿದಿರುವ ಪಾಶ್ಚಾತ್ಯ ಜನ ಸಮುದಾಯವು ಆಧ್ಯಾತ್ಮಿಕ ಗುಣದಲ್ಲಿ ಊನಗೊಂಡಿರುವುದರಿಂದ ಮಾನವನ ಬದುಕೇ ಘೋರ ಅಪಾಯಕ್ಕೆ ಗುರಿಯಾಗಿದೆ ಎನ್ನುವುದು ಟಾಯನ್‌ಬೀ ಹೇಳಿಕೆ. ಅತಿರೇಕದ ಐಹಿಕ ಸುಖಭೋಗಗಳಲ್ಲಿ ಮುಳುಗಿಹೋಗಿ ಕೇವಲ 'ಆರ್ಥಿಕ ಮಾನವ'ನಷ್ಟೆ ಆಗಿರುವ ಪಾಶ್ಚಾತ್ಯ ವ್ಯಕ್ತಿಗೆ 'ಸಮಗ್ರ ಮಾನವ'ನ ದರ್ಶನ ಮಾಡಿಸಿದಾಗಲೇ ಅವನ ಈ ಆಧ್ಯಾತ್ಮಿಕ ಕೊರತೆಯನ್ನು ನೀಗಿಸಲು ಸಾಧ್ಯ. ಧರ್ಮ, ಅರ್ಥ, ಕಾಮ, ಮೋಕ್ಷಗಳ ಚತುರ್ವಿಧ ಪುರುಷಾರ್ಥಗಳನ್ನು ಬೋಧಿಸುವ ಈ ಸಮಗ್ರ ಮಾನವ ದೃಷ್ಟಿ ಹಿಂದುದರ್ಶನದಲ್ಲದೆ, ಅರ್ಥ, ಕಾಮಗಳನ್ನು ಉಪಭೋಗಿಸುವಾಗಲೂ ಅದಕ್ಕಿಂತ ಮಿಗಿಲಾದ ಸುಖ ಒಂದಿದೆ, ತಾನು ಹೋಗಿ ಮುಟ್ಟಬೇಕಾದ ಅಂತಿಮ ಗುರಿ ಒಂದಿದೆ, ಎನ್ನುವುದರ ಪ್ರಖರವಾದ ಅರಿವಿದ್ದಾಗ ಮಾನವನು ಇಂದಿನ ಸುಖಭೋಗಗಳಲ್ಲಿ ಮುಳುಗಿಹೋಗದೆ ಅದರಿಂದ ಬರಬರುತ್ತಾ ನಿವೃತ್ತನಾಗಲೂ ಬಯಸುತ್ತಾನೆ. ಗೃಹಸ್ಥನಾಗಿದ್ದಾಗಲೂ ಅರ್ಥ ಕಾಮಗಳ ವಿಷಯದಲ್ಲಿ ಸಂಯಮ ತೋರುತ್ತಾನೆ. ವಾನಪ್ರಸ್ಥ, ಸಂನ್ಯಾಸಗಳತ್ತ ಮುನ್ನಡೆಯಲು ಅವನು ಸಮರ್ಥನಾಗುತ್ತಾನೆ.

ಚತುರ್ವಿಧ ಪುರುಷಾರ್ಥಗಳ ಸಮಗ್ರ ಮಾನವ ದೃಷ್ಟಿ ಅದನ್ನು ಸಾಧಿಸುವ ನಾಲ್ಕು ಆಶ್ರಮಗಳ ಜೀವನ ವಿಕಾಸ ಕ್ರಮ-ಇದನ್ನು ಅಳವಡಿಸಿಕೊಂಡ ಮಾನವನು ಐಹಿಕ ಸುಖದೊಂದಿಗೆ ಆತ್ಮದ ಪರಮ ಸುಖವನ್ನೂ ಕಾಣಬಲ್ಲ; ಐಹಿಕ ಸುಖಭೋಗವೇ ಸರ್ವಸ್ವ ಎನಿಸಿದಾಗ ಉದ್ಭವಿಸುವ-ಇಂದಿನ ಪಾಶ್ಚಾತ್ಯ ನಾಗರಿಕತೆಗೆ ತಟ್ಟಿರುವ ಗಂಡಾಂತರಕಾರಿ ಸಮಸ್ಯೆಗಳಿಂದ ಪಾರಾಗಬಲ್ಲ.

**ಈ ಅಂತಶ್ಶಕ್ತಿ ನಮ್ಮಲ್ಲಿದೆಯೇ?** : ಆದರೆ ಇಂಥ ಜೀವನದಾಯಿಯಾದ ದರ್ಶನವನ್ನೂ ಮನುಕುಲಕ್ಕೆ ನೀಡುವ ಚೈತನ್ಯ ನಮ್ಮಲ್ಲಿದೆಯೇ? ಇಂದು ಮಾನವ ಜೀವನದ ಸಮುದ್ರ ಮಂಥನದಲ್ಲಿ ಭೋಗಮಯ ನಾಗರಿಕತೆಯ ಹಾಲಾಹಲ ಹೊರಬಿದ್ದಿದೆ. ಅದನ್ನು ನಿಗ್ರಹಿಸಿ ತನ್ನ ಜೀವನ ದರ್ಶನದ ಅಮೃತವನ್ನು ಮಾನವ ಜನಾಂಗಕ್ಕೆ ಊಡಿಸುವ ಸಾಮರ್ಥ್ಯವನ್ನು ನಮ್ಮ ಜನಾಂಗ ಹೊಂದಿದೆಯೇ? ಅದಕ್ಕಾಗಿ ತನ್ನ ಚಿರಂತನ ಮೌಲ್ಯಗಳನ್ನು ಆಧುನಿಕ ಪರಿಸರಕ್ಕೆ ತಕ್ಕಂತೆ ಅಳವಡಿಸಿಕೊಂಡು ಒಂದು ಮಾದರಿ ಮಾನವ ಸಮಾಜವಾಗಿ ಅದು ರೂಪುಗೊಂಡು ಎದ್ದು ನಿಲ್ಲಬಲ್ಲುದೇ? ಅಥವಾ ಟಾಯನ್‌ಬೀ ತೀರ್ಮಾನಿಸಿರುವಂತೆ "ಮೃತಪ್ರಾಯವಾದ ಸಮಾಜ" ವಾಗಿಯೇ ನಮ್ಮ ಜನಾಂಗವೂ ಮುಂದುವರಿದು, ಪಾಶ್ಚಾತ್ಯ ಹಾಲಾಹಲದಲ್ಲಿ ಅದೂ ಸುಟ್ಟು ಭಸ್ಮ ಆಗಲಿದೆಯೇ?

ಕಾಲದ ಪ್ರಜ್ಞೆ, ಮೌಲ್ಯನಿಷ್ಠೆ, ಪೌರುಷ, ಪ್ರಾವೃತ್ತಿಗಳುಳ್ಳಂತಹ ಭಾರತದ ಪುತ್ರರು ಉತ್ತರಿಸಬೇಕಾದ ಸವಾಲು ಇದು.

[ಕೃಪೆ. ಧರ್ಮಶ್ರೀ]

---

ಪರಮಾತ್ಮನ ಪಥದಲ್ಲಿ ಪ್ರತಿದಿನವೂ
ಒಂದೊಂದು ಹೆಜ್ಜೆ ಮುಂದೆ ಮುಂದೆ
ಹೋಗುವ ಕೆಲಸ ಮಾಡಿದರೆ ಅದು ನಿಜವಾದ ಜೀವನ,
ಅಂತಹ ವ್ಯಕ್ತಿಯೇ ನಿಜವಾದ ವ್ಯಕ್ತಿ.

★ ★ ★

ಮನುಷ್ಯ ಸದಾ ತನ್ನನ್ನು ತಾನು ವಿಮರ್ಶಿಸಿಕೊಳ್ಳುತ್ತಿರಬೇಕು.
ಯಾವಾಗ ಮನುಷ್ಯ ತನ್ನನ್ನು ತಾನೇ ಸುಧಾರಿಸಿಕೊಳ್ಳುವನೊ
ಆಗ ಮಾತ್ರ ತಾನು ಯೋಗ್ಯನಾಗಿ ಬಾಳಿ ಜಗತ್ತಿನಲ್ಲಿ ಪ್ರೇಮದ ಬಾಳನ್ನು
ಬಾಳುವುದು ಸಾಧ್ಯವಾಗುವುದು.

★ ★ ★

ಶಾಸನಗಳು ಪ್ರಜೆಗಳ ಬದುಕಿಗೆ ರಕ್ಷಣೆಯ ಬೇಲಿಯಾಗಬೇಕೇ ಹೊರತು,
ಭಕ್ಷಣೆಯ ಮಾಳಿಗೆಯಾಗಬಾರದು.

★ ★ ★

ಶ್ರೀ ಶಿವಕುಮಾರವಾಣಿ

ಸಿದ್ಧಗಂಗಾ



# 'ಗಾದೆ ವೇದಕ್ಕೆ ಸಮಾನ'

—ಸಿ. ಕೆ' ಪರಶುರಾಮಯ್ಯ

> ಮಾನವ ಜೀವನದ ರೀತಿನೀತಿಗಳನ್ನು ಸ್ವಾರಸ್ಯವಾಗಿ, ಸಂಕ್ಷಿಪ್ತವಾಗಿ, ಪ್ರತ್ಯಕ್ಷವಾಗಿ, ಪರೋಕ್ಷವಾಗಿ ತಿಳಿಯಾಗಿ–ಗಡುಸಾಗಿ, ಮೃದುವಾಗಿ–ಮೊನಚಾಗಿ, ಮಧುರವಾಗಿ–ಒರಟಾಗಿ, ಹಲವು ಹನ್ನೊಂದು ನಿಟ್ಟಿನಲ್ಲಿ ಆಯಾ ಸಂದರ್ಭಕ್ಕೆ ನೂರಕ್ಕೆ ನೂರರಷ್ಟು ಅನ್ವಯವಾಗುವಂತೆ ಪುಟ್ಟ ಪುಟ್ಟ ವಾಕ್ಯಗಳಲ್ಲಿ ಹಿಡಿಮೂಡಿಸುವ ಗಾದೆಗಳ ಅರ್ಥ ಅಪಾರ. ಆಯ್ದ ಗಾದೆಗಳ ಪರಿಚಯವನ್ನು ಈ ಲೇಖನದೊಂದಿಗೆ ಆರಂಭಿಸಲಾಗಿದೆ.

ನಿತ್ಯ ವ್ಯವಹಾರದಲ್ಲಿ ಬಳಸುವ ಭಾಷೆಯ ಜೊತೆಯಲ್ಲೇ ಹುಟ್ಟಿ ಬೆಳೆದು ಬಂದಿರುವ ಒಂದು ಪ್ರಕಾರ 'ಗಾದೆ'. ಒಂದೇ ಒಂದು ಪಂಕ್ತಿಯ ಈ ಉಕ್ತಿಯಲ್ಲಿ ತುಂಬಿರುವ ಅರ್ಥ ಅಪಾರ. ಲೋಕಾನುಭವ ಹೆಪ್ಪುಗಟ್ಟಿದಂತಿರುವ ಈ ಉಕ್ತಿಗಳನ್ನು ನಮ್ಮ ಜನ ನಿರಾಯಾಸವಾಗಿ ಸಂದರ್ಭಕ್ಕೆ ಅತ್ಯಂತ ಸೂಕ್ಷ್ಮವಾಗಿ ಹೊಂದಿಕೆಯಾಗುವಂತೆ ಬಳಸುವುದನ್ನು ನೋಡಿದಾಗ ಆಶ್ಚರ್ಯವಾಗುತ್ತದೆ.

ಓದು-ಬರಹ ಬಾರದ ಆದರೆ ಜೀವನದ ಸಾಂದ್ರ ಅನುಭವವುಳ್ಳ ನಮ್ಮ ಗ್ರಾಮಾಂತರ ಪ್ರದೇಶದ ಜನರ ಮಾತಿನಲ್ಲಿ ಹೆಜ್ಜೆ ಹೆಜ್ಜೆಗೂ ಹಾಸುಹೊಕ್ಕಾಗಿ ಹೆಣೆದುಕೊಂಡು ಬಂದಿರುವ ಈ ಅಪರೂಪದ ನುಡಿಗಟ್ಟುಗಳನ್ನು ಪ್ರತ್ಯೇಕವಾಗಿ ಕೇಳುವುದಕ್ಕಿಂತ ಅವರ ಮಾತುಗಾರಿಕೆಯೊಂದಿಗೇ ಕೇಳಿದಾಗ ಅವುಗಳ ಸಹಜ ಚೆಲುವು ಸ್ಫುರಿಸುತ್ತದೆ.

ಯಾವುದೇ ಮಾತನ್ನಾಡುವಾಗಲ್ಲೂ ಸಾಮಾನ್ಯವಾಗಿ "ಅದೇನೋ ಗಾದೆ ಹೇಳ್ತಾರಲ್ಲ" ಎನ್ನುವುದನ್ನು ನಾವು ಗುರುತಿಸಬಹುದು. ಈ ಗಾದೆ ಮಾತುಗಳನ್ನು ಆ ಜನ ಪ್ರಯಾಸಪಟ್ಟು ಯೋಚಿಸಿ, ಸಂದರ್ಭಕ್ಕೆ ಹೊಂದಿಸಿ ಹೇಳಬೇಕೆಂದು ಆಲೋಚಿಸಿರುವುದಿಲ್ಲ. ಅಪೂರ್ವ ಅರ್ಥ ತುಂಬಿದ ಈ ಪುಟ್ಟ ಪುಟ್ಟ ವಾಕ್ಯಗಳು ಅವರಿಗರಿವಿಲ್ಲದಂತೆಯೇ ಅವರ ಮಾತಿನಲ್ಲಿ ಸೇರಿಬರುತ್ತವೆ. ಸಂದರ್ಭದ ಅಭಿಪ್ರಾ

ಯವನ್ನು ಹೆಚ್ಚು ಸಮರ್ಥಿಸುತ್ತವೆ, ಸ್ಪಷ್ಟಪಡಿಸುತ್ತವೆ, ವಿವರಿಸುತ್ತವೆ. ಒಬ್ಬನು ಹೇಳುತ್ತಿದ್ದ ಒಂದು ಅಭಿಪ್ರಾಯ, ಸಲಹೆ, ಸೂಚನೆ, ನಿರ್ದೇಶನ, ನೀತಿ, ತಿಳುವಳಿಕೆ ಕೇಳುವವನಿಗೆ ಹಿಡಿಸದೆ ಅದನ್ನು ಒಪ್ಪಿಕೊಳ್ಳಲು ಅವನೇ ಇನ್ನೂ ಹಿಂದು ಮುಂದು ನೋಡುತ್ತಿದ್ದಾಗ ಹೇಳುವವನ ಮಾತಿನ ಆಶಯ-ಆಂತರ್ಯವನ್ನು ದೃಢಪಡಿಸಿ ಒಪ್ಪಿಕೊಳ್ಳಲು ಪ್ರೇರೇಪಿಸುವಂತಹ ರೀತಿಯಲ್ಲಿ ಒಂದು ಮಾತು ಗಾದೆಯಾಗಿ ಹೊರಬರುತ್ತದೆ. ಹಾಗೆ ಬಂದ ಮಾತು ಅವನು ಅದುವರೆಗೆ ವಿವರಿಸಿದ ಅಭಿಪ್ರಾಯಕ್ಕೆ ದೃಢೀಕರಣ ಮುದ್ರೆಯನ್ನೊತ್ತುತ್ತದೆ. ಎಷ್ಟೋ ಮಾತುಗಳಿಂದ ಮನದಟ್ಟಾಗದಿದ್ದ ಅಂಶವನ್ನು ಈ ಒಂದೆರಡು ನುಡಿಯ ಚಿಕ್ಕ ವಾಕ್ಯ ಹೋಲಿಕೆಯೊಂದಿಗೆ ಸಮಂಜಸವಾಗಿ ತರ್ಕಬದ್ಧವಾಗಿ ಮನದಟ್ಟು ಮಾಡುತ್ತದೆ. ಸುತ್ತ ಸೇರಿದ್ದ ಹತ್ತು ಜನರೂ ಈ ಮಾತು ಸರಿ! ಎನ್ನುವಂತಹ ಒಪ್ಪಿಗೆ ಸೂಚಿಸಲು ಹಾದಿ ಮಾಡುತ್ತದೆ.

ಇಂತಹ ಅಪೂರ್ವ ಅಭಿಪ್ರಾಯಸೂಚಕ, ನೀತಿ ನಿರ್ದೇಶಕ ವಾಕ್ಯಗಳು ಜನಮನದಲ್ಲಿ ಯಾವಾಗ ಹೇಗೆ ಹುಟ್ಟಿ ಬೆಳಕಿಗೆ ಬಂದುವು ಎಂಬುದನ್ನು ವಿವರಿಸುವುದು ಕಷ್ಟ. ಬಹುಶಃ ಮನುಷ್ಯನು ಆಲೋಚನಾಪೂರ್ವಕವಾಗಿ ಮಾತನಾಡುವುದನ್ನು ಕಲಿತ ಘಟ್ಟದಿಂದಲೇ ಈ ಉಕ್ತಿಬಂಧವೂ ಅವನ ಮಾತುಗಾರಿಕೆಯಲ್ಲಿ ಸೇರ್ಪಡೆಯಾಗಿದೆ. ಸುತ್ತಮುತ್ತಣ ವ್ಯವಹಾರದೊಂದಿಗೆ ಅವನು ಬೆಳೆದಂತೆ, ಅನುಭವದ ಆಳದಿಂದ ಅವನ ಅಭಿವ್ಯಕ್ತಿ ಮೊನಚಾದಂತೆ ಅವನ ಮಾತು ಹೊಳಪಾಯಿತು. ಹಾಗೆ ಭಾಷೆಯ ಬಳಕೆಯಲ್ಲಿ ಪರಿಣತಿಯನ್ನು ಸಾಧಿಸುತ್ತ ಮುಂದುವರಿದ ಅವನಿಗೆ ಚಮತ್ಕಾರಯುತವಾಗಿ ಮಾತನಾಡುವ ಕಲೆ ಸಿದ್ಧಿಸಿತು. ಜೊತೆಗೆ ಸುತ್ತಣ ಹತ್ತೆಂಟು ಘಟನೆ, ವಿಚಾರಗಳನ್ನು ತರ್ಕಬದ್ಧವಾಗಿ ತೂಗಿ ನೋಡುವ ಹೋಲಿಸಿ ವಿಮರ್ಶಿಸುವ ಶಕ್ತಿಯನ್ನು ರೂಢಿಸಿಕೊಂಡ ಪರಿಣಾಮವಾಗಿ ಆಯಾ ಸಂದರ್ಭ ಸನ್ನಿವೇಶಗಳಿಗೆ ಹೊಂದಿಕೊಂಡಂತೆ ಮಾತುಗಳು ಹೊರಬರತೊಡಗಿದವು ಎಂದು ಹೇಳಬಹುದು. ಹಾಗೆ ಬಂದ ಮಾತುಗಳು ಆಯಾ ಭಾಷೆಗಳ ಶ್ರೀಮಂತಿಕೆಯನ್ನು ಹೆಚ್ಚಿಸಿವೆ. ಒಂದು ಸಂದರ್ಭದ ಅಭಿಪ್ರಾಯವನ್ನು ಹೋಲಿಕೆಯೊಂದಿಗೆ ವಿಮರ್ಶಿಸಿ ವಿಚಾರಪೂರ್ಣವಾಗಿ ಮೂಡಿಬಂದ ಈ ಮಾತು ಸಹಜವಾಗಿಯೇ ಸೌಂದರ್ಯದಿಂದ ಕೂಡಿರುತ್ತದೆ. ಹೊಳಪಿನಿಂದ ಶೋಭಿಸುತ್ತದೆ.

ಗಾದೆಗಳ ಅಂತರಂಗದ ಮತ್ತೊಂದು ವೈಶಿಷ್ಟ್ಯವೆಂದರೆ ಕಿರಿದರಲಿ ಹಿರಿದರ್ಥವನ್ನು ಅಡಗಿಸಿಕೊಂಡಿರುವುದು. ಸಂಕ್ಷಿಪ್ತತೆ ಅದರ ಪ್ರಮುಖ ಲಕ್ಷಣ. ವಾಚ್ಯಾರ್ಥವನ್ನು ಮೀರಿದ ಮತ್ತೊಂದು ಅರ್ಥವನ್ನು ಧ್ವನಿಸುವುದು ಅದರ ಗುಟ್ಟು. ಜನಮನದಲ್ಲಿ ನೆಲೆಯಾಗಿ ನಿಲ್ಲಲು ಅನುಕೂಲವಾಗುವಂತಹ ಪ್ರಾಸವನ್ನು ಮೈಗೂಡಿಸಿ



ಕೊಂಡಿರುವುದು ಅದರ ಮಹತ್ವ. ಹೀಗಾಗಿ ಈ ಅಭಿವ್ಯಕ್ತಿ ಪ್ರಾಕಾರ ಸಂಸ್ಕೃತಿ, ಪರಂಪರೆ, ಇತಿಹಾಸ, ತತ್ವ, ದರ್ಶನ ಮುಂತಾದ ಮಹತ್ವದ ಅಂಶಗಳನ್ನು ಕುರಿತ ಬಂಧವಾಗಿರುವುದರ ಜೊತೆಗೆ ಮಾನವ ಜೀವನದ ರೀತಿ-ನೀತಿಗಳನ್ನು ವಾಚ್ಯವಾಗಿ–ಸೂಚ್ಯವಾಗಿ, ಪ್ರತ್ಯಕ್ಷವಾಗಿ–ಪರೋಕ್ಷವಾಗಿ, ತಿಳಿಯಾಗಿ-ಗಡುಸಾಗಿ, ಮೃದುವಾಗಿ-ಮೊನಚಾಗಿ, ಮಧುರವಾಗಿ–ಒರಟಾಗಿ —ಹಲವು ಹನ್ನೊಂದು ನಿಟ್ಟಿನಲ್ಲಿ ಆಯಾ ಸಂದರ್ಭಕ್ಕೆ ನೂರಕ್ಕೆ ನೂರರಷ್ಟು ಅನ್ವಯವಾಗುವಂತೆ ಪುಟ್ಟ ನುಡಿಗಟ್ಟುಗಳಲ್ಲಿ ಹಿಡಿದಿಟ್ಟಿರುವ ಒಂದು ಪರಿಣಾಮಕಾರಿಯಾದ ಪ್ರಾಕಾರವಾಗಿದೆ. ಆದ್ದರಿಂದಲೇ "ಗಾದೆ ವೇದಕ್ಕೆ ಸಮಾನ" ಎಂಬ ಬಹುದೊಡ್ಡ ಮನ್ನಣೆ ಈ ಮಾತಿಗೆ ದೊರೆತಿದೆ.

ಜನಮನವನ್ನು ತಿದ್ದಿ, ಎಚ್ಚರಿಸಿ, ನಿರ್ದೇಶಿಸುವ ಮುಖ್ಯ ಗುರಿ ಹೊಂದಿರುವ ಈ ವಾಕ್ಯಬಂಧ ಹಾಸ್ಯ, ವ್ಯಂಗ್ಯ, ವಿಡಂಬನೆಯಿಂದ ತೀರ ನೇರ ಮಾತುಗಳಲ್ಲಿ ಬರುವಾಗ ಶೀಲ–ಅಶ್ಲೀಲ, ವಾಚ್ಯ–ಅವಾಚ್ಯ ಎಂಬ ಕಲ್ಪನೆಯೂ ಇಲ್ಲದೆ ಹೊರಬರುತ್ತವೆ. ಸಹಜವಾದ ಅಭಿವ್ಯಕ್ತಿ ಸತ್ಯವಾದ ಅಭಿವ್ಯಕ್ತಿಯಾಗಿ ಸಾರ್ಥಕವಾದ ಮತ್ತು ಸುಂದರವಾದ ಅಭಿವ್ಯಕ್ತಿಯಾಗಿರುವುದರಿಂದ ಅದು ಒಳಗೊಂಡಿರುವ ಸತ್ಯ ಇಲ್ಲಿ ಮುಖ್ಯವಾಗುತ್ತದೆ.

ನಮ್ಮ ಜನಮನದಲ್ಲಿ ತಲೆತಲಾಂತರಗಳಿಂದ ನೆಲೆಯೂರಿ ಕಾಲಕಾಲಕ್ಕೆ ಆಯಾ ಸನ್ನಿವೇಶ, ಸಂದರ್ಭಗಳನ್ನು ಮೈಗೂಡಿಸಿಕೊಂಡು ವೈವಿಧ್ಯಪೂರ್ಣವಾಗಿ ಬೆಳೆದು ಬರುತ್ತಿರುವ ಗಾದೆಗಳ ಅಂತರಂಗವನ್ನು ಅರಿಯುವ ಪ್ರಯತ್ನ ಈ ಲೇಖನದ ಉದ್ದೇಶ. ಕನ್ನಡ ಭಾಷೆಯಲ್ಲಿ ಜನ ಜೀವನದಲ್ಲಿ ಹಾಸುಹೊಕ್ಕಾಗಿ ಹೆಣೆದುಕೊಂಡಿರುವ ಈ ಗಾದೆಗಳಲ್ಲಿ ಕೆಲ–ಕೆಲವನ್ನು ಕುರಿತು ಇಲ್ಲಿ ವಿಚಾರ ಮಾಡಲಾಗಿದೆ.

**ಅಟ್ಟಕ್ಕೆ ಹಾರದ ಬಡ್ಡಿ ಬೆಟ್ಟಕ್ಕೆ ಹಾರ್ಯಾಳೆ :**

ಮನುಷ್ಯ ತನ್ನ ಯೋಗ್ಯತೆಯನ್ನರಿತು ಮಾತನಾಡಬೇಕು. ಅವನ ಶಕ್ತಿಗೆ ಮೀರಿದ ಕೆಲಸವನ್ನು ಮಾಡುತ್ತೇನೆ ಎಂಬ ಮಾತು ಅರ್ಥವಿಲ್ಲದ್ದು. ಹಾಗೆ ತನ್ನ ಸಾಮರ್ಥ್ಯ ಮೀರಿ ಮಾತನಾಡುವ ವ್ಯಕ್ತಿಯನ್ನು ಕುರಿತು ಹೇಳುವ ಈ ಗಾದೆ ಅದು ಬರೀ ಬಡಾಯಿ ಎಂಬುದನ್ನು ಉಪಮೆಯೊಂದಿಗೆ ಸ್ಪಷ್ಟಪಡಿಸುತ್ತದೆ.

**ಅಟ್ಟದಿಂದ ಬಿದ್ದವನ ದಡಿಯಿಂದ ಚಚ್ಚಿದರು :**

ಒಬ್ಬ ವ್ಯಕ್ತಿ ಜೀವನದಲ್ಲಿ ಕಷ್ಟಕ್ಕೆ ಸಿಕ್ಕಿದಾಗ, ಸಂದಿಗ್ಧ ಪರಿಸ್ಥಿತಿಗೆ ಒಳಗಾದಾಗ ಸುತ್ತಣ ಜನ ಅವನನ್ನು ಅನುಕಂಪದಿಂದ ನೋಡಿ ನೆರವಾಗಬೇಕು. ಇದು ಮಾನವೀಯ ದೃಷ್ಟಿ. ಅದು ಬಿಟ್ಟು ಅವನಿಗಿರುವ ಕಷ್ಟದ ಜೊತೆಗೆ ಮತ್ತಷ್ಟು

ಕೋಟಲೆಗಳನ್ನು ಕೊಟ್ಟಾಗ ಅವನ ಜೀವನ ದುರ್ಭರವಾಗುತ್ತದೆ. ಮೊದಲೇ ಅಟ್ಟದಿಂದ ಬಿದ್ದು ಜರ್ಜರಿತನಾಗಿದ್ದಾನೆ; ಅವನನ್ನು ದಡಿ ತೆಗೆದುಕೊಂಡು ಚಚ್ಚಿದರೆ ಏನಾಗಬಹುದು ? ಈ ಹೋಲಿಕೆ ಸಂದರ್ಭವನ್ನು ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ.

ಇದೇ ಅಂಶವನ್ನು ಚಿತ್ರಿಸುವ ಮತ್ತೊಂದು ಗಾದೆ, "ಗಾಯದ ಮೇಲೆ ಬರೆ ಎಳೆದಂತೆ" ಎಂಬುದು. ಗಾಯ ವಾಸಿಯಾಗುವಂತಹ ಔಷಧಿ ಹಾಕಿ ಉಪಚಾರ ಮಾಡಬೇಕೇ ಹೊರತು ಮತ್ತಷ್ಟು ವ್ರಣವಾಗುವಂತೆ ಬರೆ ಹಾಕಬಾರದು. ಕಷ್ಟ ಪರಿಹಾರವಾಗುವಂತಹ ಸಹಾಯ ಮಾಡಿ ಸಾಂತ್ವನಗೊಳಿಸಬೇಕೇ ಹೊರತು, ಇನ್ನಷ್ಟು ಕಷ್ಟ ಕೊಟ್ಟು ದುರಂತಕ್ಕೆ ಎಡೆ ಕೊಡಬಾರದು.

**ಅತ್ತೂ ಕರೆದು ಔತಣಕ್ಕೆ ಹೇಳಿಸಿಕೊಂಡಂತೆ :**

ಔತಣಕ್ಕೆ ಆಹ್ವಾನ ಇದ್ದಾಗ ಮಾತ್ರ ಬೆಲೆ. ಅದು ಸಾಮಾಜಿಕ ಗೌರವದ ಮಾತು. ಔತಣಕ್ಕೆ ಆಹ್ವಾನಿಸುವ ವ್ಯಕ್ತಿ ಯಾರನ್ನು ಕರೆಯಬೇಕು, ಯಾವರೀತಿ ಅವರನ್ನು ಆಹ್ವಾನಿಸಬೇಕು ಎಂಬುದನ್ನು ತುಂಬ ಗಂಭೀರವಾಗಿ ಚಿಂತಿಸಿ ನಿರ್ಧರಿಸುತ್ತಾನೆ. ಎಷ್ಟೋ ವೇಳೆ ಕೆಲವು ವ್ಯಕ್ತಿಗಳನ್ನು ಊಟಕ್ಕೆ ಕರೆಯಬೇಕಾದಾಗ ಅವರು ಒಪ್ಪಿ ಬರುವುದೇ ದೊಡ್ಡ ಮಾತು. ಪರಿಸ್ಥಿತಿ ಹೀಗಿರುವಾಗ ನನ್ನನ್ನೂ ಔತಣಕ್ಕೆ ಕರೆಯಿರಿ, ಎಂದು ಹೇಳುವುದಾಗಲಿ, ಕರೆಯುವವರಿಗೆ ಇಷ್ಟವಿಲ್ಲದಿದ್ದರೂ ಅವರನ್ನು ಒತ್ತಾಯಿಸಿ ಬೇಡಿ ಕರೆಸಿಕೊಳ್ಳುವ ಪ್ರಯತ್ನ ಮಾಡುವುದು ಎಂತಹ ಅವಮಾನಕರ ಸಂಗತಿ. ಇದು ವ್ಯಕ್ತಿತ್ವವನ್ನೇ ಮಾರಿಕೊಂಡಂತೆ. ಮಾನ-ಅಭಿಮಾನ ಬಿಟ್ಟು ಇಂತಹ ಸ್ಥಿತಿಗೆ ಇಳಿಯುವ ವ್ಯಕ್ತಿ ಗೌರವವನ್ನು ಗಾಳಿಗೆ ತೂರಿಕೊಂಡಂತೆ ಎಂಬುದನ್ನು ಈ ಗಾದೆ ತುಂಬ ಅರ್ಥವತ್ತಾಗಿ ಧ್ವನಿಸುತ್ತದೆ. ಇದೇ ಅಂಶವನ್ನು ಪ್ರತಿಬಿಂಬಿಸುವ ಮತ್ತೊಂದು ಗಾದೆ, "ಅಗುಳಿಗೆ ಹೋದ ಮಾನ ಆನೆ ಕೊಟ್ಟರೂ ಬರದು".

**ಅತ್ತೆಗೆ ಒಂದು ಕಾಲ, ಸೊಸೆಗೆ ಒಂದು ಕಾಲ :**

ಇದೊಂದು ಬಹು ಪ್ರಖ್ಯಾತವಾದ ಗಾದೆ. ಜೀವನ ಚಕ್ರದಲಾಗುವ ಬದಲಾವಣೆಯನ್ನು ಸೂಚಿಸುವ ಮಾತು. ಮನುಷ್ಯ ತನಗೆ ಅಧಿಕಾರ ಅವಕಾಶ ಸಿಕ್ಕದ ಸಂದರ್ಭದಲ್ಲಿ ವಿವೇಕದಿಂದ ನಡೆಯಬೇಕು. ವಿವೇಚನೆಯಿಂದ ದೂರವಾಗಬಾರದು. ಏಕೆಂದರೆ ಯಾವುದೇ ವ್ಯಕ್ತಿಯ ಜೀವನದಲ್ಲಿ ಅಧಿಕಾರ ಐಶ್ವರ್ಯ ಇವು ಶಾಶ್ವತವಲ್ಲ. ಕಾಲಚಕ್ರದಲ್ಲಿ ಏರುಪೇರಾಗುವುದು ಪ್ರಕೃತಿಯ ನಿಯಮ ಮೇಲೆ ಏರಿದ ತೆರೆ ಕೆಳಕ್ಕೆ ಬರಲೇ ಬೇಕು. ಈ ತತ್ವವನ್ನು ಅತ್ತೆ ಸೊಸೆ



ಯರ ಉಪಮೆಯ ಮೂಲಕ ಚಿತ್ರಿಸುವ ಈ ಗಾದೆಯ ಅರ್ಥ ವಿವರಿಸಿದಷ್ಟು ಹಿಗ್ಗುವ ಗುಣದಿಂದ ಕೂಡಿದೆ.

**ಅಪ್ಪಂತ ಹುಡುಗಿ ಆಗಬೇಕು, ಇಪ್ಪತ್ತೈದು ರೂಪಾಯಿ ತೆರ ಆಗಬೇಕು :**

ಲೋಕ ವ್ಯವಹಾರದಲ್ಲಿ ಮನುಷ್ಯ ಸಾಮಾನ್ಯವಾಗಿ ಕಡಿಮೆ ವೆಚ್ಚದಲ್ಲಿ ಅಧಿಕ ಅನುಕೂಲ ಪಡೆಯಲು ಹಾತೊರೆಯುತ್ತಾನೆ. ಇದು ಮಾನವ ಸಹಜವಾದ ಗುಣ ಅಥವಾ ಒಂದು ರೀತಿಯ ದೌರ್ಬಲ್ಯವೆಂದರೂ ತಪ್ಪಲ್ಲ. ಪ್ರತಿ ವಹಿವಾಟಿನಲ್ಲೂ ಈ ಆಸೆ ಸರ್ವಸಾಮಾನ್ಯವಾಗಿ ಕಾಣುತ್ತದೆ. ಪೂರ್ವಕಾಲದಲ್ಲಿ ಹೆಣ್ಣನ್ನು ತಂದುಕೊಳ್ಳುವವರು ಹೆಣ್ಣಿನ ತಂದೆಗೆ ಅವರವರ ಅಂತಸ್ತುಗಳಿಗೆ ಅನುಗುಣವಾಗಿ ಇಂತಿಷ್ಟು ಹಣವನ್ನು ಕೊಡಬೇಕಾಗಿತ್ತು. ಈ ಹಣಕ್ಕೆ 'ತೆರ' ಎಂದು ಕರೆಯುತ್ತಿದ್ದರು. ಹುಡುಗಿ ಲಕ್ಷಣವಾಗಿ ಹರೆಯ ಮೀರದವಳಾಗಿದ್ದು, ಒಳ್ಳೆಯ ಮನೆತನಕ್ಕೆ ಸೇರಿದ್ದರೆ ಆ ಹೆಣ್ಣಿಗೆ ಹೆಚ್ಚು ತೆರ ಕೊಡಬೇಕಾಗಿತ್ತು. ಒಳ್ಳೆಯ ಮನತನದ ಸುಂದರ ಹೆಣ್ಣು ಬೇಕು, ತೆರದ ಹಣವೂ ಕಡಿಮೆ ಇರಬೇಕು ಎಂದರೆ ಅದು ಸಾಧ್ಯವಿಲ್ಲದ ಮಾತು. ತೀರ ವ್ಯವಹಾರಿಕವಾಗಿ ನಡೆದುಕೊಂಡು ಸ್ವಲ್ಪ ಖರ್ಚಿನಲ್ಲಿ ಅತಿ ಲಾಭವನ್ನು ಬಯಸುವ ವ್ಯಕ್ತಿಯ ಮನೋಧರ್ಮವನ್ನು ಪ್ರತಿಬಿಂಬಿಸುವ ಈ ಗಾದೆ ನಮ್ಮವರ ಹಿಂದಿನ ಒಂದು ಸಂಪ್ರದಾಯವನ್ನು ಪರಿಚಯ ಮಾಡಿಕೊಡುತ್ತದೆ.

**ಅಮ್ಮನವರು ಪಟ್ಟಕ್ಕೆ ಬರುವ ಹೊತ್ತಿಗೆ ಅಯ್ಯನವರು ಚಟ್ಟಕ್ಕೆ :**

ಮದುವೆ ಮಾಡುವಾಗ ಹೆಣ್ಣು-ಗಂಡುಗಳ ವಯಸ್ಸಿನ ಅಂತರ ಅತಿಯಾಗಬಾರದು. ವ್ಯಕ್ತಿಯ ಜೀವನದಲ್ಲಿ ಯೌವನವೆಂಬುದು ಬೇಗ ಬಾಡುವಂತಹ ಅವಧಿ. ಈ ಹಂತದಲ್ಲಿ ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡು ಬಾಳಿ ಜೀವನದ ಸುಖ ಸೌಭಾಗ್ಯಗಳನ್ನು ಮನಸಾರೆ ಅನುಭವಿಸಿದಾಗ ಮುಪ್ಪಿನ ಮಾಗಿದ ಜೀವನ ಶಾಂತಿಯಿಂದ ಸಾರ್ಥಕವಾಗಿ ಕೊನೆಗೊಳ್ಳುತ್ತದೆ. ಆದ್ದರಿಂದ ತೀರ ಚಿಕ್ಕ ವಯಸ್ಸಿನ ಹೆಣ್ಣನ್ನು ಎಡಪ್ರಾಯದ ಗಂಡಿಗೆ ಮದುವೆ ಮಾಡಬಾರದು. ಒಬ್ಬರನ್ನೊಬ್ಬರು ಅರ್ಥಮಾಡಿಕೊಳ್ಳಲಾಗದ ಈ ಬಾಳು ದುರಂತವಾಗುತ್ತದೆ. ಲೋಕದ ಟೀಕೆಗೆ ಗುರಿಯಾಗುತ್ತದೆ, ಹಾಸ್ಯಾಸ್ಪದವಾಗುತ್ತದೆ. ಏರುಪೇರಿನ ಈ ಸಂಬಂಧ ಮಾಡಿದಾಗ ಹೆಣ್ಣು ತನ್ನ ಯೌವನದ ಪೂರ್ಣ ಸ್ಥಿತಿಯನ್ನು ಮುಟ್ಟುವ ಹೊತ್ತಿಗೆ ಗಂಡು ಯೌವನದ ಅಂತಿಮ ಘಟ್ಟವನ್ನು ದಾಟಿರುತ್ತಾನೆ. ಈ ಸ್ಥಿತಿಯನ್ನು 'ಪಟ್ಟ' ಮತ್ತು 'ಚಟ್ಟ' ಎಂಬ ತೀರ ವಿರುದ್ಧವಾದ ಅರ್ಥದ ಪದಗಳನ್ನು ಬಳಸಿ ಮೂಡಿರುವ ಗಾದೆ ಹಣದಾಸೆಗಾಗಿ ಮುದುಕನಿಗೆ ಚಿಕ್ಕಪ್ರಾಯದ ಹೆಣ್ಣನ್ನು ಧಾರೆ ಎರೆಯುವ ಕಠಿಣ ಮನಸ್ಸಿನ ವ್ಯಕ್ತಿಗಳಿಗೆ ಎಚ್ಚರಿಕೆಯ ಛಡಿ ಏಟಿನಂತಿದೆ.

**ಅರೆಕಲ್ಲು ನೆನೆ ಹಾಕಿದಂತೆ :** ಯಾವ ಕೆಲಸವನ್ನು ಮಾಡಬೇಕು ಅದು ಎಷ್ಟರಮಟ್ಟಿಗೆ ಸಾಧ್ಯ; ಅದರಿಂದ ಸಾರ್ಥಕಫಲ ಸಿಗುವುದೇ? ವೃಥಾಶ್ರಮವಷ್ಟೇ ಫಲವೆ? ಈ ಒಂದೊಂದನ್ನೂ ಯೋಚಿಸಿ ಕೆಲಸಕ್ಕೆ ಕೈ ಹಾಕಬೇಕು—ಎಂಬ ವಿವೇಕ ವನ್ನು ಒಳಗೊಂಡಿರುವ ಈ ಗಾದೆ, ಕಾರ ಅರೆಯುವ ಕಲ್ಲನ್ನು ಎಷ್ಟು ಕಾಲ ನೀರಿನಲ್ಲಿ ನೆನೆಹಾಕಿದರೂ ಅದು ಮೃದುವಾಗಲಾರದು ಎಂಬ ಸಾಮತಿಯನ್ನು ಹೇಳುತ್ತದೆ.

**ಅರೆಗೆಲಸವನ್ನು ಅರಸನಿಗೂ ತೋರಿಸಬೇಡ :** ಒಂದು ವೃತ್ತಿಪರ ಕೆಲಸ ಹೇಗೆ ಕೊನೆಗೊಳ್ಳಬೇಕು, ವಿವಿಧ ಹಂತಗಳಲ್ಲಿ ಅನುಸರಿಸಬೇಕಾದ ಕ್ರಮಗ ಳಾವುವು, ಅದನ್ನು ಪೂರೈಸುವಾಗ ತಲೆದೋರುವ ಸಮಸ್ಯೆಗಳನ್ನು ಹೇಗೆ ಪರಿಹರಿಸಿ ಕೊಳ್ಳಬೇಕೆಂಬುದನ್ನು ಆ ವೃತ್ತಿಯಲ್ಲಿ ಅನುಭವವಿರುವ ಪರಿಣತನು ಮಾತ್ರ ಅರಿತು ಕೊಳ್ಳಬಲ್ಲ. ಅದನ್ನು ಮಧ್ಯದಲ್ಲಿ ಅವರಿವರಿಗೆ ತೋರಿಸಬಾರದು. ಅದರಿಂದ ನೂರೆಂಟು ಸಲಹೆಗಳು ಬಂದು ಅನೇಕ ಸಂದರ್ಭಗಳಲ್ಲಿ ಕೆಲಸ ಕೆಡುವ ಸಂಭವವೇ ಹೆಚ್ಚು. ಆದ್ದರಿಂದಲೇ ಅರ್ಧ ಕೆಲಸವನ್ನು ಅರಸನಿಗೂ ತೋರಿಸಬಾರದೆಂಬ ಅನುಭವದ ನುಡಿ ಬಂದಿರುವುದು.

**ಅಂಗೈ ಹುಣ್ಣಿಗೆ ಕನ್ನಡಿ ಏಕೆ ?** ಸಾಕ್ಷಾತ್ತಾಗಿ ಕಣ್ಣಿಗೆ ಕಾಣುವ ಸತ್ಯಕ್ಕೆ ಬೇರೆ ವಿವರಣೆ ಬೇಕಾಗಿಲ್ಲ. ಸತ್ಯವನ್ನು ಮರೆಮಾಚಿ ಹೇಳಲು ಹೊರಡುವ ಪ್ರಯತ್ನ ಹಾಸ್ಯಾಸ್ಪದವಾಗಿ ತೋರುತ್ತದೆ. ಎಂತಹ ಮೂರ್ಖನೂ ಅಂತಹ ವಿವರಣೆಯನ್ನು ಒಪ್ಪಲಾರ. ಆದ್ದರಿಂದ ಸ್ಪಟಿಕ ಶುಭ್ರವಾದ ಅಂಶವನ್ನು ಮುಚ್ಚಿಡುವುದಾಗಲಿ ಅಥವಾ ಅದಕ್ಕೆ ಬೇರೆ ಅರ್ಥ ಕೊಡಲು ಹೋಗುವುದಾಗಲಿ ಅಸಾಧ್ಯ. ಅಂಗೈ ಮೇಲಿರುವ ಗಾಯವನ್ನು ತನ್ನ ಕಣ್ಣಿನಿಂದಲೇ ನೋಡಿಕೊಳ್ಳಲು ಸಾಧ್ಯವಾಗಿರುವಾಗ ಅದಕ್ಕೆ ಕನ್ನಡಿಯ ನೆರವೇಕೆ? ಎನ್ನುವುದು ಈ ಗಾದೆಯ ಪ್ರಶ್ನೆ.

---

**ಈ ದ್ವಂದ್ವಕ್ಕೆ ಉಪಾಯವೆಂತು ?**

" ನಾವು ಬದುಕಿ ಬಾಳುವ ಜಗತ್ತು ದ್ವಂದ್ವಯುಕ್ತವಾದುದು. ಇದು ಸಾಪೇಕ್ಷ ನಿರಪೇಕ್ಷವಲ್ಲ ಎಂಬುದು ಗಳಿಗೆ ಗಳಿಗೆಗೂ ಅನುಭವಕ್ಕೆ ಬರುತ್ತದೆ. ಆದರೂ ಇದನ್ನೇ ಅಂತಿಮವೆಂದು ನಾವು ಸ್ವೀಕರಿಸುವುದಿಲ್ಲ. ದ್ವಂದ್ವಗಳ ವಿರೋಧ ಕಮ್ಮಿಯಾಗಲು ಶ್ರಮಿಸುತ್ತೇವೆ. ಸುಖ ಬೇಕು, ದುಃಖ ಬೇಡ; ನಲಿವು ಬೇಕು, ನೋವು ಬೇಡ. ಆದರೆ ಇವು ಒಂದರ ಬೆನ್ನಿನಲ್ಲಿ ಇನ್ನೊಂದು ಇವೆ, ತಪ್ಪಿದ್ದಲ್ಲ. ಹಾಗಾದರೆ ಇದಕ್ಕೆ ಉಪಾಯವೇನು" ?

(ಜನಪದ ಕೃಪೆ)

---



# ವೀರಶೈವ ಪ್ರವಚನಕಾರರು*

—ಗೊ. ರು. ಚನ್ನಬಸಪ್ಪ

ಯಾವುದೇ ಒಂದು ಸಮಾಜದ ಧರ್ಮತತ್ತ್ವ, ನೀತಿಸಂಹಿತೆ, ಆಚಾರ ವಿಚಾರಗಳ ಪ್ರಚಾರಕ್ಕೆ ಅನುಭವಗೋಷ್ಠಿಗಳು, ತತ್ತದ್ಧರ್ಮತತ್ತ್ವ ಪ್ರತಿಪಾದಕ ಪುರಾಣ ಮತ್ತು ಸಾಹಿತ್ಯಕೃತಿಗಳ ಪಠಣ, ಕೀರ್ತನೆ, ತತ್ತ್ವಭೂಯಿಷ್ಠ ಹಾಡುಗಳ ವಾಚನಗಳೇ ಮೊದಲಾದವು ಉತ್ತಮ ಸಾಧನಗಳು. ಈ ಸಾಧನೆಗಳ ಮೂಲಕ ಸಾಮಾನ್ಯಜನಜೀವನದಲ್ಲಿ ನೀತಿಕ್ರಿಯಾಚಾರ, ಸಮಯನಿಷ್ಠೆ, ಧರ್ಮತತ್ತ್ವ ಪಾಲನೆ ಗಳನ್ನು ಕುದುರಿಸಲು ಎಲ್ಲ ಧರ್ಮದವರೂ ಹೆಣಗಿದುದು, ಹೆಣಗುತ್ತಿರುವುದು ಕಂಡುಬರುತ್ತದೆ.

ವೀರಶೈವ ಧರ್ಮತತ್ತ್ವಗಳ ಸ್ವರೂಪವನ್ನು ಪ್ರಚಾರ ಮಾಡಲು ಬಹು ಪ್ರಾಚೀನ ಕಾಲದಿಂದಲೂ ಅನೇಕ ಶಿವಾನುಭಾವ ಪ್ರಚಾರಕರು, ಪುರಾಣ ಪ್ರವಚನ ಪಟುಗಳು, ಗಮಕಿಗಳು, ವಾದಿಗಳು, ವಾಗ್ಮಿಗಳು, ವ್ಯಾಖ್ಯಾನಕಾರರು, ಕೀರ್ತನ (ಕಥಾಕಾಲಕ್ಷೇಪ)ಕಾರರು, ಕಂಡುಬರುತ್ತಾರೆ. ಆ ಬಗೆಗೆ ಒಂದು ಸ್ಥೂಲಸಮೀಕ್ಷೆ ಮಾಡುವುದೇ ಪ್ರಕೃತ ಲೇಖನದ ಮುಖ್ಯೋದ್ದೇಶ.

ಬಸವಾದಿ ಪ್ರಮಥರ ಇತಿಹಾಸ ಪ್ರಸಿದ್ಧ ಧಾರ್ಮಿಕ, ಸಾಮಾಜಿಕ ಕ್ರಾಂತಿಯ ನಂತರ ಅವರ ನೂತನ ವಿಚಾರಧಾರೆಯನ್ನು ಭಾರತಾದ್ಯಂತ ಪ್ರಚಾರ ಮಾಡತಕ್ಕ ಒಂದು ಸುವ್ಯವಸ್ಥಿತ ಏರ್ಪಾಡು ಆಗ ಇತ್ತೆಂದು ಪ್ರಾಚೀನ ವೀರಶೈವ ಸಾಹಿತ್ಯಗ್ರಂಥ ಗಳಿಂದ ನಮಗೆ ಅನೇಕ ಆಧಾರಗಳು ಲಭ್ಯವಾಗುತ್ತವೆ. ೧೨ನೆಯ ಶತಮಾನದ ಮತ್ತು ಅನಂತರದ ಶರಣ ಶರಣೆಯರಲ್ಲಿ ಅನೇಕರು ಪುರಾಣ, ಕೀರ್ತನೆ, ಗಾಯನ, ವೇಷಧಾರಣೆ, ಶಿವಾನುಭವ ಗೋಷ್ಠಿಗಳ ಮಾಧ್ಯಮದ ಮೂಲಕ ತಮ್ಮ ತಮ್ಮ ಪಾಲಿನ ಧರ್ಮಸಂಸ್ಕೃತಿಯ ಪ್ರಚಾರ ಮಾಡಿದ್ದಾರೆ. ಈ ರೀತಿಯ ಪ್ರಚಾರಮಾಡಿದ

---

*i) ಈ ಲೇಖನ ತಯಾರಿಸಲು ಪಂಡಿತ ಚನ್ನಪ್ಪ ಎರೇಸೀಮೆಯವರ ಸಲಹೆ, ಸಹಕಾರ, ಸಂಗ್ರಹ ಗಳನ್ನು ಕೃತಜ್ಞತೆಯಿಂದ ಸ್ವೀಕರಿಸಿದ್ದೇನೆ.

ii) ಈ ಲೇಖನದಲ್ಲಿ ಬಂದಿರುವ ವ್ಯಕ್ತಿಗಳ ಬಗೆಗೆ ಕಾಲಮಾನದ ಆದ್ಯತೆ ಕ್ರಮವನ್ನಾಗಲಿ ಅಥವಾ ಹೆಸರುಗಳ ಅಕ್ಷರಾನುಕ್ರಮಣಿಕೆಯ ಕ್ರಮವನ್ನಾಗಲಿ ಅನುಸರಿಸಿಲ್ಲ. ವಿವರಗಳು ದೊರಕಿದಂತೆಲ್ಲ ಸಂಗ್ರಹಿಸಿ ಬರೆಯಲಾಗಿದೆ.

ಶಿವಶರಣರಲ್ಲಿ ಮುಖ್ಯವಾಗಿ ಭದ್ರಗಾಯಕ, ಚಾರಮ, ಇಂಡಿಯಶಾಂತಯ್ಯ, ಸಿಂಬಾಣದ ಗಣೇಶ್ವರ, ಅಲ್ಲಯ್ಯ, ಕೇಶಿರಾಜ, ನಿರ್ಲಜ್ಜ ಶಾಂತಯ್ಯ, ಸುಜ್ಞಾನಿದೇವ, ಶ್ರೀಪತಿ ಪಂಡಿತ, ವೇಮನಾರಾಧ್ಯ, ತಾಳಿಕೋಟೆಯ ಶಿವದೇವ, ಎಡೆಮಠದ ನಾಗಿದೇವ, ವೀರದೇವಮ್ಮ, ವಿಮಳಾದೇವಿ ಇವರೇ ಮೊದಲಾದವರ ಹೆಸರನ್ನು ಹೇಳಬಹುದಾಗಿದೆ.[1] ಇವರೆಲ್ಲ ಒಂದಿಲ್ಲೊಂದು ರೀತಿಯಲ್ಲಿ ಪ್ರವಚನ, ಸಂಗೀತ, ಪುರಾಣ ಪ್ರವಚನಗಳ ಮೂಲಕ ಬಸವಾದಿ ಪ್ರಮಥರ ತತ್ತ್ವಗಳನ್ನು ಕರ್ನಾಟಕಾಂಧ್ರಾದಿ ದೇಶಗಳಲ್ಲಿ ಪ್ರಚಾರಮಾಡಿದ್ದಾರೆ. ಬಹುರೂಪಿ ಚೌಡಯ್ಯನಂಥ ವೇಷಧಾರಿ ಕಲಾವಿದ ವೇಷಗಳನ್ನು ಹಾಕಿ ಹಾಡಿ, ಕುಣಿದು ಶಿವಾನುಭವ ತತ್ತ್ವ ಪ್ರಚಾರ ಮಾಡಿದದು ಕಂಡುಬರುವುದು. ಬಸವಣ್ಣನವರ ಕಾಲದಲ್ಲಿ ಅವರ ಅಮೂಲ್ಯವಾದ ವಚನಗಳನ್ನು ಭಾರತಾದ್ಯಂತ ಪ್ರಚಾರ ಮಾಡುವ ಪ್ರಚಾರಕರಿದ್ದರೆಂಬ ಬಗೆಗೆ ನಮಗೆ ಹರಿಹರನ ಬಸವರಾಜದೇವರ ರಗಳೆ ಸುಳುವು ಕೊಡುತ್ತದೆ. ಉದಾಹರಣೆಗೆ: ಓರ್ವ ಮಾಹೇಶ್ವರನು ಕಳಿಂಗ ದೇಶಕ್ಕೆ ಹೋಗಿ ಬಸವಣ್ಣನವರ ವಚನ ಹಾಡಿದ ನಂತರ ವಚನಾರ್ಥವನ್ನು ಗ್ರಹಿಸಿದ ಮಹಾದೇವಿಸೆಟ್ಟಿಯೆಂಬುವನು ಬಸವಣ್ಣನವರನ್ನು ಪರೀಕ್ಷಿಸಲು ಕಲ್ಯಾಣಕ್ಕೆ ಬಂದಂತೆ ಬಸವರಾಜದೇವರ ರಗಳೆ ಉಲ್ಲೇಖಿಸಿರುತ್ತದೆ.[2] ಕಲ್ಯಾಣ ಮೊದಲಾದ ಪ್ರಸಿದ್ಧ ನಗರಗಳಲ್ಲಿ ಮಠಮಾನ್ಯಗಳನ್ನಾಶ್ರಯಿಸಿ ಶಿವಾನುಭವ ಗೋಷ್ಠಿಗಳು ಏರ್ಪಟ್ಟು ಅಲ್ಲಿ ಅನುಭಾವಿಗಳಾದ ಪ್ರವಚನಕಾರರ ಪ್ರವಚನ ನಡೆಯುತ್ತಿತ್ತು. ಅನೇಕ ಜಂಗಮಮೂರ್ತಿಗಳು ದೇಶದ ನಾನಾ ಮೂಲೆಗಳನ್ನು ತಿರುಗುತ್ತ ಪ್ರಚಾರ ಕಾರ್ಯಗಳನ್ನು ವಿವಿಧ ರೀತಿಯ ಕಲೆಯಿಂದ ಪ್ರಚಾರಮಾಡುತ್ತಿದ್ದರು. (ತತ್ತ್ವಭೂಯಿಷ್ಟವಾದ ಪದಪದ್ಯಗಳು, ಮಂತ್ರಗೋಪ್ಯ ಪದಮಂತ್ರ ಗೋಪ್ಯ ಮೊದಲಾದ ಸಾಹಿತ್ಯ ಸೃಷ್ಟಿಯಾದುದೂ ಕೂಡ ಹೀಗೆ ಪ್ರಚಾರಕ್ಕೆ ಮುಖ್ಯಸಾಧನವಾಗಲಿ ಎಂದೇ ಇರಬಹುದು.) ಇವನ್ನು ಪರಿಣಾಮಕಾರಿಯಾಗಿ ಪ್ರವಚನ ಮಾಡಿ ಜನತೆಯಲ್ಲಿ ಜ್ಞಾನಪ್ರಕಾಶವನ್ನುಂಟುಮಾಡಬಹುದೆಂದು ಅಂದಿನ ಶರಣರು ಕಂಡುಕೊಂಡಿರಬಹುದು. ಈ ದೃಷ್ಟಿಯಿಂದಲೇ ನಿಜಗುಣರ ಕೈವಲ್ಯಪದ್ಧತಿ, ಮುಪ್ಪಿನಷಡಕ್ಷರಿ, ಸರ್ಪಭೂಷಣರ ಕೃತಿಗಳೇ ಮೊದಲಾದುವನ್ನು ಸಮಾಲೋಚಿಸಬಹುದು.

ಇದೇ ರೀತಿಯಲ್ಲಿ ಪ್ರಖ್ಯಾತ ಕವಿಗಳ ಕಾವ್ಯಗಳೂ ಗಮಕಿಗಳಿಂದ ಮತ್ತು ಪುರಾಣ ಪ್ರವಚನ ಪಟುಗಳಿಂದ ಪರಿಣಾಮಕಾರಿಯಾಗಿ ಪ್ರಚಾರಗೊಳ್ಳುತ್ತಿದ್ದವು.

---

1) ಡಾ. ಫ. ಗು. ಹಳಕಟ್ಟಿ : ಶಿವಶರಣರ ಚರಿತ್ರೆಗಳು ಭಾ. ೨, ಪು, ಪೀಠಿಕೆ ೧ ರಿಂದ ೭೯ ನೋಡಿ. ಮತ್ತು ಶಿವಶರಣೆಯರ ಚರಿತ್ರೆ ಪೀಠಿಕಾ ಪ್ರಕರಣ ನೋಡಿ.

2) ಬ. ರಾ. ದೇ. ರಗಳೆ ಸ್ಥಲ : ೧೨ ಸಾಲು ೧ ರಿಂದ ೩೬ ರವರೆಗೆ ನೋಡಿ, ಟಿ, ಎಸ್. ವೆಂಕಣ್ಣಯ್ಯ ಸಂ. ಪ್ರಥಮ ಮುದ್ರಣ)



ಹರಿಹರ ರಾಘವಾಂಕರಂಥ ಕ್ರಾಂತಿಕಾರಕ ಕವಿಗಳ ಕಾವ್ಯಗಳನ್ನು ಪ್ರವಚನಕಾರರು ದೇಶಾಂತರಗಳಲ್ಲಿ ಪ್ರಚಾರ ಮಾಡುತ್ತಿದ್ದುದು ಸಮಕಾಲೀನ ಸಾಹಿತ್ಯದಿಂದ ವೇದ್ಯವಾಗುವ ಅಂಶ. ಹರಿಹರ ಮಹಾಕವಿಯ ನಂಬಿಯಣ್ಣನ ರಗಳೆಯ ಸ್ವಾರಸ್ಯವನ್ನು ತಮಿಳುನಾಡಿನ ತಿರುವಾಲೂರಿನ ತ್ಯಾಗರಾಯನ ಸೇವೆಯ ನಾಗವಾಸದ ಮೇಳದೊಡತಿ ಮಾದೇವಿ ಕೇಳಿ, ಅದನ್ನು ಬರೆದ ಹರಿಹರನ ಮೇಲೆ ಮೋಹಗೊಂಡು ಹಂಪೆಗೆ ಬಂದುಬಿಟ್ಟಳಂತೆ.[3] ಸ್ವತಃ ರಾಘವಾಂಕನೇ ತನ್ನ ಮಿಸಲುಗವಿತೆಯಿಂದ ವೀರೇಶಚರಿತೆಯನ್ನು ಓರಂಗಲ್ಲಿನ ಕಾಕತೀಯ ಅರಸು ಪ್ರತಾಪರುದ್ರನ ಸಭೆಯಲ್ಲಿ ಗಮಕ ವಾಚನಮಾಡಿ(ಓದಿ), ಎಲ್ಲರನ್ನೂ ಮೆಚ್ಚಿಸಿದ ವಿಷಯ ಸಾಹಿತ್ಯ ಕ್ಷೇತ್ರದಲ್ಲಿ ಅತ್ಯಂತ ಪ್ರಸಿದ್ಧವಾದ ಅಂಶಗಳಲ್ಲೊಂದು. ಕೆರೆಯ ಪದ್ಮರಸನ ಮುಂದೆ ರಾಘವಾಂಕನ ಸಿದ್ಧರಾಮ ಚರಿತ್ರೆಯನ್ನು ವಿರೂಪಾಕ್ಷನೆಂಬ ಗಮಕಿಯು 'ಇನಿರಸದ ಸೊಬಗಿನ ಸೋನೆಗರೆವಂತೆ' ವಾಚನಮಾಡಿ ಪದ್ಮರಸನನ್ನು ಮೆಚ್ಚಿಸಿದನೆಂದು ತಿಳಿದುಬರುವುದು.[4] ಸ್ವತಃ ರಾಘವಾಂಕನೇ ಓರ್ವ ಉತ್ತಮ ಪ್ರವಚನಕಾರನೆಂದು ತಿಳಿಯಲು ವಿಪುಲ ಆಧಾರಗಳು ಸಿಗುತ್ತವೆ.

ಇಂಥ ಶಿವಾನುಭವ ಪ್ರವಚನಕಾರರ, ಕೀರ್ತನೆ ಪುರಾಣಕಾರರ ಸಮೂಹ ತೋಂಟದ ಸಿದ್ಧಲಿಂಗ ಶಿವಯೋಗಿಗಳ ಕ್ರಾಂತಿಯ ನಂತರವೂ ನಮಗೆ ವಿಪುಲ ಸಂಖ್ಯೆಯಲ್ಲಿ ಕಾಣಸಿಗುತ್ತದೆ. ಕ್ರಿ.ಶ.ಸು. ೧೬ನೆಯ ಶತಮಾನದಲ್ಲಿ ಶೀಲವಂತಾರ್ಯರ ಶಿಷ್ಯ ಹಲಗೆಯಾರ್ಯನು ಅತ್ಯುತ್ತಮ ಮಟ್ಟದ ಶಿವಾನುಭವ ಪ್ರವಚನಕಾರ. ಇವನ ಪ್ರವಚನ ವಿಷಯವೇ ವಿಸ್ತಾರಗೊಂಡು ಗುಬ್ಬಿಯ ಮಲ್ಲಣಾರ್ಯನ ವೀರಶೈವಾಮೃತ ಪುರಾಣವಾದ ಹಾಗೆ ತಿಳಿದುಬರುವುದು. ಹಲಗೆಯಾರ್ಯನು ಜ್ಯೋತಿಯಮ್ಮ ಎಂಬ ಶಿವಶರಣೆಯ ಮನೆಯಲ್ಲಿ ಕಲ್ಲೇಶ್ವರ, ಸೈಂಧವದ ಶಾಂತದೇವ, ಕಲ್ಯಾಣದ ಮಲ್ಲೇಶ್ವರ, ನಂಜಯ್ಯ, ಸಪ್ಪೆಯ ಮಲ್ಲಿಕಾರ್ಜುನವಿಭು, ಸಮಾಧಿ ಸಿದ್ದಮ್ಮ, ಸಪ್ಪೆಯಮ್ಮ ಮುಂತಾದ ವಿವೇಕಿಗಳ ಮಧ್ಯದಲ್ಲಿ ಶಿವಾನುಭವ ಪ್ರವಚನ ಮಾಡುತ್ತಿದ್ದನೆಂದು ತಿಳಿದುಬರುವುದು.[5] ಈ ಹಲಗೆಯಾರ್ಯನು ಘನವಿದ್ವಾಂಸನಾಗಿದ್ದು ಒಂದು ಶೂನ್ಯ ಸಂಪಾದನೆಯನ್ನು ಬರೆದಿದ್ದಾನೆ. ಸ್ವತಃ ತೋಂಟದ ಸಿದ್ಧಲಿಂಗ ಶಿವಯೋಗಿಗಳೇ

---

3) ರಾಘವಾಂಕ ಚರಿತೆ : ಅಧ್ಯಾಯ ೧೪, ಪದ್ಯ ೯೪ ರಿಂದ ೧೦೨ ರವರೆಗೆ ನೋಡಿ.

4) ರಾಘವಾಂಕ ಚರಿತೆ : ಅಧ್ಯಾಯ ೧೬, ಪದ್ಯ ೮ ರಿಂದ ೨೯ ರವರೆಗೆ ನೋಡಿ, ಇಲ್ಲಿ ವಿರೂಪಾಕ್ಷನೆ ಜಂಗಮರೂಪ ಧರಿಸಿ ಹೋಗಿ ಗಮಕ ವಾಚನ ಮಾಡಿದನೆಂದು ಹೇಳಿರುವ ಪವಾಡದ ಹಿನ್ನೆಲೆ ಕಾವ್ಯದ ಉತ್ಕೃಷ್ಟತೆಯನ್ನು ಹೇಳುವ ಒಂದು ಪರೋಕ್ಷ ಸಾಧನವೆಂದು ತಿಳಿಯಬೇಕು. ಸತ್ಯವಿಷಯ : ಓರ್ವ ಉತ್ತಮ ಗಮಕಿಯ ಗಮಕವಾಚನವೆಂದು ಭಾವಿಸಲು ಬರುವಂತಿದೆ.

5) ಕ. ಕ. ಚ. II ಪು. ೧೪೨,

ಅತ್ಯುಚ್ಚಮಟ್ಟದ ಶಿವಾನುಭವ ಪ್ರವಚನ ಪಟುಗಳು; ಇವರ ಪರಿಣಾಮಕಾರೀ
ಶಿವಾನುಭವ ಪ್ರವಚನದ ಮೂಲಕ ೧೫–೧೬ನೆಯ ಶತಮಾನದ ವೀರಶೈವ ಧಾರ್ಮಿಕ
ರಂಗ ಜಾಜ್ವಲ್ಯಮಾನವಾಗಿ ಬೆಳಗಿತೆನ್ನಬಹುದು. ಇವರು ಪ್ರವಚನ ಕಾಲದಲ್ಲಿ
ಅಪ್ಪಣೆ ಕೊಡಿಸಿದ ವಿವಿಧ ವಿಷಯಗಳೇ ಬೇರೆಯವರಿಂದ ಸಂಗ್ರಹಿಸಲ್ಪಟ್ಟು 'ತೋಂಟದ
ಸಿದ್ಧಲಿಂಗೇಶ್ವರರ ವಚನಗಳು' ಎಂದು ಈಗ ನಾವು ಕರೆಯುವ ವಚನಗಳಾಗಿವೆಯೆಂದು
ಊಹಿಸಲು ಸಾಧ್ಯವಿದೆ.[6] ಹೀಗೆ ಎಂದಿನಿಂದಲೂ ಈ ಸಮಾಜದಲ್ಲಿ ಕವಿ, ಗಮಕಿ,
ಪುರಾಣಕಾರ, ಶಿವಾನುಭವ ಪ್ರವಚನಕಾರ, ಕೀರ್ತನಕಾರ, ಮೊದಲಾದವರಿಂದ
ಆದ ಅನುಪಮ ಧಾರ್ಮಿಕ ಸಾಮಾಜಿಕ ಸೇವೆ ಅವಿಸ್ಮರಣೀಯ. ಭೀಮಕವಿಯು
ಪಾಲ್ಕುರಿಕೆ ಸೋಮನಾಥರ ಬಸವಪುರಾಣವನ್ನು ಕನ್ನಡಿಸಿ ಕನ್ನಡಿಗರ ಕೈಗಿತ್ತ ಮೇಲೆ
ಬಸವಪುರಾಣ ಪ್ರವಚನಕ್ರಾಂತಿ ಅತ್ಯದ್ಭುತ ರೀತಿಯಲ್ಲಿ ಈ ಸಮಾಜದಲ್ಲಿ ಆದಹಾಗೆ
ಕಂಡುಬರುತ್ತದೆ. ಆ ಪುರಾಣ ಪ್ರವಚನ ಮತ್ತು ಶ್ರವಣಗಳೆರಡೂ ಪುಣ್ಯಪ್ರದವೆಂಬ
ಭಾವನೆ ವೀರಶೈವರಲ್ಲಿ ಬೆಳೆದುಬಂದುದೇ ಒಂದು ಇತಿಹಾಸವಾಗಿದೆ. ಈ ಪುರಾಣದ
ಪ್ರವಚನ ಮಾಡುವವರಿಗೆ ಅದರಲ್ಲಿ ಅಂತರ್ಗತವಾಗಿರುವ ದೃಷ್ಟಾಂತ ಕಥೆಗಳು ಪೂರ್ವ
ಕಥೆಗಳ ಬಗೆಗೆ ಅನೇಕ ಗ್ರಂಥಗಳು ಹುಟ್ಟಲು ಕಾರಣವಾಗಿದೆ.[7] ವೀರಶೈವಾಮೃತ
ಮಹಾಪುರಾಣ, ಭಾವಚಿಂತಾರತ್ನ ಗ್ರಂಥಕರ್ತೃವಾದ ಗುಬ್ಬಿಯ ಮಲ್ಲಣಾರ್ಯ (ಕ್ರಿ.ಶ.
೧೫೧೩) ಬಸವಪುರಾಣ ಪ್ರವಚನಕಾರರಲ್ಲಿ ಅದ್ವಿತೀಯನೆಂದು ಕೀರ್ತಿತನಾಗಿದ್ದಾನೆ.
ಶಿವಗಂಗೆಯ ಮೇಲಣಗವಿಯ ಸಿಂಹಾಸನಾಧೀಶ ಶಾಂತನಂಜೇಶ್ವರನ ಶಿಷ್ಯನಾದ
ಈತನನ್ನು ಜನರು 'ಕರ್ನಾಟಕ ಸಂಸ್ಕೃತೋಭಯ ಕವಿತ್ವಂಗಳಂ ಪೂರ್ಣಲಕ್ಷಣ
ಚಮತ್ಕಾರದಿಂದ ಮಾಳ್ಪ ನಿರ್ಣಯಕೆ ನೀನೆ ಯಗ್ಗಳವಲಾ; **ಬಸವ ಪೌರಾಣ
ದರ್ಪಣಂ ಪೇಳ್ವೊಡೆ ಆರ್ಣವ ಪ್ರಾಂತದ ಭೂಮಿಯೊಳು ಪೆಸರಾಗಿರ್ದೆ'**
ಎಂದು ಹೊಗಳುತ್ತಿದ್ದರಂತೆ.[8] ಗುಬ್ಬಿಗೆ 'ಗುಬ್ಬಿ' ಎಂದು ಹೆಸರು ಬರಲು ಈ ಬಸವ

---

6) ಚನ್ನವೀರಜಂಗಮದೇವ ಕೃತ 'ಷಟಸ್ಥಲವಲ್ಲಭ' ಅಧ್ಯಾಯ ೬. ಪದ್ಯ ೨೧-೨೨ ನೋಡಿ.

7) ಉತ್ತರ ದೇಶದ ಬಸವಲಿಂಗದೇವ (ಕ್ರಿ.ಶ. ೧೭೦೦) ಬಸವೇಶ್ವರ ಪುರಾಣದ ಕಥಾಸಾಗರ. ಇದ
ರಲ್ಲಿ ೪೬೪ ಕಥೆಗಳು ಸಮಾವೇಶಗೊಂಡಿವೆ. 'ಬಸವೇಶ್ವರ ಪುರಾಣದ ಕಥೆಗಳನ್ನು ಭಕ್ತಮಹೇಶ್ವ
ರರು ಸುಲಭದಲ್ಲಿ ತಿಳಿವಂತೆ ಕಲ್ಪಿತ ಕಥೆಗಳಲ್ಲದೆ ಸಕಲ ಶಿವಪುರಾಣ ಸಮ್ಮತವಾಗಿ ಕಥಾಸಾಗರ
ವೆಂಬ ಪೆಸರಿಟ್ಟು ಬಸವಾದಿ ಪ್ರಮಥರ ಕರುಣದಿಂ ಮಾಡಿದೆವು' ಎಂದು ಕವಿ ಹೇಳಿಕೊಂಡಿ
ದ್ದಾನೆ. (ಕ, ಕ, ಚ, II ಪು, ೨೭೨-೭೩) ಭೈರವೇಶ್ವರ ಕಾವ್ಯದ ಕಥಾಸಾರ, ಭೈರವೇಶ್ವರ
ಕಾವ್ಯದ ಕಥಾಸೂತ್ರರತ್ನಾಕರ–ಮುಂತಾದ ಕಾವ್ಯಗಳೂ ಕೂಡ ಪುರಾಣ ಪ್ರವಚನ, ಕೀರ್ತನ
ಕಾರರೇ ಮೊದಲಾದವರಿಗೆ ಅನುಕೂಲ್ಯ ಒದಗಿಸುವ ಕೃತಿಗಳೆಂದೇ ತಿಳಿಯಬೇಕು.

8) ಕ. ಕ. ಚ. II ಪು. ೧೩೮-೧೩೯.

(ಮುಂದುವರಿಯುತ್ತದೆ)



# ಆಯುರ್ವೇದದಲ್ಲಿ 'ಆಡುಸೋಗೆ' ಗಿಡಮೂಲಿಕೆ

—ರಾಜವೈದ್ಯ ವೈ.ಆರ್. ಪಂಡಿತವಾಸು
M.R.C.I.M.A. ಆರ್. ಎಂ. ಪಿ.

ಶ್ರೇಷ್ಠವಾದ ಮೂಲಿಕೆಗಳಲ್ಲಿ "ವೈದ್ಯಮಾತಾ ವನಸ್ಪತಿ" ಎಂಬ ಮೂಲಿ
ಕೆಯೂ ಒಂದಾಗಿದೆ. ಇದನ್ನು ಕನ್ನಡದಲ್ಲಿ "ಆಡುಸೋಗೆ" ಎಂದೂ, ಸಂಸ್ಕೃತ
ದಲ್ಲಿ "ವಾಸಿಕಾ" ಎಂದೂ, ಮಲಯಾಳದಲ್ಲಿ "ಆಡಾತೊಡೈ" ಎಂದೂ ಕರೆಯು
ತ್ತಾರೆ. ಅನುವಂಶೀಕ ಆಯುರ್ವೇದ ವೈದ್ಯರು "ವೈದ್ಯಮಾತಾ" ಎಂದೂ ಕರೆ
ಯುವ ವಾಡಿಕೆ ಇರುತ್ತದೆ.

ಆಡುಸೋಗೆಯು ಸುಮಾರಾಗಿ ಒಂದು ಆಳು ಪ್ರಮಾಣಕ್ಕಿಂತ ಸ್ವಲ್ಪ ಹೆಚ್ಚು
ಎತ್ತರವಾಗಿ ಮಣ್ಣು ಉಬ್ಬಿಕೊಂಡು ಬೆಳೆಯುವ ಸ್ಥಳಗಳಲ್ಲಿ ಸ್ವೇಚ್ಛೆಯಾಗಿ ಬೆಳೆ
ಯುತ್ತದೆ. ಕೆಲವು ಪಾರ್ಕ್‌ಗಳಲ್ಲೂ ಬೆಳೆಸುತ್ತಾರೆ. ಕೇರಳ, ತಮಿಳುನಾಡು
ಮತ್ತು ಬಂಗಾಳ ದೇಶಗಳ ಹಲವು ಪ್ರದೇಶಗಳಲ್ಲಿ ಹೇರಳವಾಗಿ ಬೆಳೆದು ನಿಂತಿರುತ್ತೆ.
ಇದರ ಎಲೆಗಳು ಮಾವಿನ ಎಲೆಗಳಂತೆ ಉದ್ದವಾಗಿ ಅಗಲ ಚಿಕ್ಕದಾಗಿ ಇರುತ್ತವೆ.
ಇದರ ಹೂವು ಮಲ್ಲಿಗೆ ಹೂವಿನ ಆಕಾರದಲ್ಲಿ ಸುಮಾರು ಎರಡು ಅಂಗುಲ ಉದ್ದವಾ
ಗಿರುತ್ತದೆ. ಇದರ ದಳಗಳು ಹಸಿರಾಗಿದ್ದು ಬಗ್ಗದೆ ನಿಂತಿರುತ್ತವೆ. ಪರಿಮಳ ಇರು
ವುದಿಲ್ಲ. ಇದರ ಎಲೆಯನ್ನು ಸ್ವಲ್ಪ ಬಾಯಲ್ಲಿ ಅಗಿದು ನೋಡಿದರೆ ಸುಮಾರಾಗಿ
ಕಹಿ ಕಂಡುಬರುತ್ತದೆ.

ಇದೇ ವಾತ ಪಿತ್ಥ, ಪ್ರಕೋಪ, ಸಂಬಂಧವಾದ ವಿಕಾರಕಳು, ರಕ್ತದೋಷ,
ಶ್ವಾಸಕೋಶ (ಗೂರಲು) ಕೆಮ್ಮು, ಭಯಂಕರ ಸ್ವರೂಪದ ಎಲ್ಲಾ ವಿಧವಾದ ಜ್ವರ
ಗಳು, ವಾಂತಿ. ಕುಷ್ಟ ಮತ್ತು ಕ್ಷಯ, ನೀರಿನಂತಹ ಭೇದಿ ಹೊಟ್ಟೆ ನುಲಿದು ಆಗುವ
ಭೇದಿ, ತ್ರಿದೋಷ ವಿಕಾರಗಳು, ಬಾವು ಮತ್ತು ಕೀಲುಗಳ ಹಿಡಿತ ಮುಂತಾದ ರೋಗ
ಗಳನ್ನೆಲ್ಲಾ ಗುಣಪಡಿಸುತ್ತದೆ. ಇದು ಅತಿ ಮುಖ್ಯವಾಗಿ ಹೊಂದಿರುವ ಗುಣಗಳೇ
ನೆಂದರೆ ಕ್ರಿಮಿಗಳನ್ನು ಕೊಲ್ಲುವುದರಲ್ಲಿ ಬೇವಿನ ಮರಕ್ಕೆ ಸಮಾನವಾಗಿಯೂ ಮೂತ್ರ
ದೋಷವನ್ನು ನಿವಾರಿಸುವ ಆನೆ ನೆಗ್ಗಿಲುಗಿಡದ ಸಹೋದರನಾಗಿಯೂ, ಸೊಂಟ
ಹಾಗೂ ನರಗಳ ದೌರ್ಬಲ್ಯವನ್ನು ನಿವಾರಿಸುವುದರಲ್ಲಿ ನುಗ್ಗೆಮರದ ಜ್ಯೇಷ್ಠನಾಗಿಯೂ
ಕೆಟ್ಟ ವಾಸನೆಗಳನ್ನು ನಿವಾರಿಸುವ ರಾಮಗುಳ್ಳಗಿಡದ ಸಮಾನವಾಗಿಯೂ ಇದೆಯೆಂಬು
ದಾಗಿ ಅನುವಂಶಿಕ ಆಯುರ್ವೇದ ವೈದ್ಯರ ಅಭಿಪ್ರಾಯವಾಗಿದೆ.

ಇದನ್ನು ಉಪಯೋಗಿಸುವ ವಿಧಾನ ಮತ್ತು ಇದರಿಂದ ಗುಣವಾಗುವ ರೋಗ
ಗಳ ವಿವರಗಳನ್ನು ಈ ಮುಂದೆ ಬರೆಯಲಾಗಿದೆ.

ಎಳಸಾಗಿರುವ ಆಡುಸೋಗೆ ಎಲೆಗಳನ್ನು ತಂದು ನೀರು ಹಾಕದೆ ಕುಟ್ಟಿ ರಸ
ವನ್ನು ಹಿಂಡಿಕೊಂಡು ಈ ರಸವನ್ನು ೩ರಿಂದ ೫ತೊಟ್ಟು ಮಕ್ಕಳಿಗೂ ೫ರಿಂದ ೧೦
ತೊಟ್ಟು ಹುಡುಗರಿಗೂ, ದೊಡ್ಡವರಿಗೆ ೧೦ರಿಂದ ೧೫ ತೊಟ್ಟುಗಳೂ ಈ ಪ್ರಮಾಣ
ದಲ್ಲಿ ಶುದ್ಧವಾದ ಜೇನುಬೆರಸಿ ದಿನವೊಂದಕ್ಕೆ ೩ವೇಳೆ ಕೊಟ್ಟರೆ ರಕ್ತವಾಂತಿ, ವಿಪ
ರೀತ ಕೆಮ್ಮು, ಕಫ ಕಟ್ಟಿಕೊಂಡು ಬಳಲುವಿಕೆ, ಸರಿಯಾಗಿ ಶ್ವಾಸ ಆಡದಿರುವಿಕೆ,
ಕೆಮ್ಮುವಾಗ ಕಫದ ಸಮೇತ ರಕ್ತ ಬೀಳುವಿಕೆ ಮುಂತಾದ ರೋಗಗಳಿಂದ ನರಳುವವ
ರಿಗೆ ಒಂದು ವರಪ್ರಸಾದವಾಗಿ ಗುಣಪಡಿಸುತ್ತದೆ.

ಈ ರಸದಿಂದಲೇ ಆಮಶಂಕೆ ಭೇದಿ, ಶೀತಭೇದಿ, ರಕ್ತಮಯವಾಗಿಯೇ
ಹೋಗುವ ಭೇದಿ ಮುಂತಾದುವುಗಳಿಗೆ ದಿನವೊಂದಕ್ಕೆ ೨ವೇಳೆ ಎಮ್ಮೆಯ ಹಾಲಿನಲ್ಲಿ
೧೫ರಿಂದ ೨೫ತೊಟ್ಟು ಈ ರಸದಿಂದ ಕಲಸಿ ಕೊಟ್ಟರೆ ಮೇಲ್ಕಂಡ ಭೇದಿಗಳು ಗುಣ
ವಾಗುತ್ತವೆ. ಆದರೆ ಮಕ್ಕಳಿಗೆ ಮತ್ತು ಹುಡುಗರಿಗೆ ಔಷಧದ ಪ್ರಮಾಣವನ್ನು ಕಡಿ
ಮೆಯಾಗಿ ಉಪಯೋಗಿಸಬೇಕು.

ಆಡುಸೋಗೆಯ ಎಲೆಯ ಕಷಾಯವನ್ನು ಮಾಡಿ ಕುಡಿಯುವುದರಿಂದ ವಿಶೇಷ
ವಾಗಿ ಕಫವು ಬರುತ್ತಿರುವ ಕೆಮ್ಮಲಿನವರಿಗೆ ತುಂಬಾ ಗುಣಕಾರಿಯಾಗಿರುತ್ತದೆ.

ಇದರ ಎಲೆಯನ್ನು ನೀರಿನಲ್ಲಿ ಕುದಿಸಿ ಇದರ ಹಬೆಯ ಶಾಖವನ್ನು ಕಾಪಡ
ಕೊಡುವುದರಿಂದ ಕೀಲುಗಳ ನೋವು, ಹಿಡಿತ ಮತ್ತು ಊತ ಸಹ ಗುಣವಾಗುತ್ತದೆ.

ಇದರ ಬೇರನ್ನು ಚೆನ್ನಾಗಿ ಒಣಗಿಸಿ ಕುಟ್ಟಿ ಚೂರ್ಣ ಮಾಡಿ 2ಗುಂಜಿ ತೂಕ
(ದೊಡ್ಡವರಿಗೆ) ದಿನವೊಂದಕ್ಕೆ 3ವೇಳೆ ಉಪಯೋಗಿಸಿದರೆ ಮಲೇರಿಯಾ ನಿರ್ಮೂಲ
ವಾಗುತ್ತದೆ. ಮಕ್ಕಳಿಗೆ-ಹುಡುಗರಿಗೆ ಪ್ರಮಾಣ ಕಮ್ಮಿ ಇರಬೇಕು.

ಇದರ ಬೇರನ್ನು ಅರೆದು ಹಿಂಡಿದ ರಸವನ್ನು 3ಚಮಚದಷ್ಟು ಪ್ರಸವ ವೇದನೆ
ಯಿಂದ ನರಳುವ ಸಹೋದರಿಯರಿಗೆ ಕೊಡಲು 15 ನಿಮಿಷಗಳೊಳಗಾಗಿ ಪ್ರಸವ
ವಾಗುತ್ತದೆ. ಹೊಟ್ಟೆಯಲ್ಲಿ ಕೂಸು ಅಡ್ಡ ಬಿದ್ದಿದ್ದರೂ ಸಹಾ ಹೆದರಬೇಕಾಗಿಲ್ಲ.
ಆ ಸಮಯದಲ್ಲಿ ಈ ರಸವು ಸಂಜೀವನದಂತೆ ಕೆಲಸ ಮಾಡಿ ಕಷ್ಟವನ್ನು ನಿವಾರಿಸುತ್ತದೆ.

ನನ್ನ ಅನುಭವದಲ್ಲಿ ಜರುಗಿದ ಒಂದು ವಿಷಯವನ್ನು ಇಲ್ಲಿ ಹೇಳಲು ಆಶಿಸು
ತ್ತೇನೆ. ಸುಮಾರು 20 ವರ್ಷಗಳ ಹಿಂದೆ "ಮದನ ಕಾಮೇಶ್ವರಿ" ಲೇಹ್ಯವನ್ನು



ತಯಾರಿಸಬೇಕೆಂದು, ಇಂದೂರು ಮಾಜಿ ಮಹಾರಾಜ ಶ್ರೀ ತುಕೋಜಿರಾವ್
ಹೊಂಳ್ಕರ್‌ರವರ ಆಹ್ವಾನದ ಮೇಲೆ ಹೋಗಿದ್ದೆ. ನಾನು ಹೋದ ಕೆಲವು ದಿನಗಸಲ್ಲಿ
ಅರಮನೆಯ ಕೆಲಸದ ಸಹೋದರಿ ಯೊಬ್ಬಳಿಗೆ ಹೆರಿಗೆ ಸಮಯವಾಯಿತು. 2 ದಿನ
ಗಳಿಂದಲೂ ಸಹಿಸಲಾರದಷ್ಟು ಬಾಧೆ ಉಂಟಾಯಿತು. ಅಲ್ಲಿನ ಆಸ್ಪತ್ರೆಯಲ್ಲಿ ಮಗು
ಅಡ್ಡ ಬಿದ್ದಿದೆ, ಶಸ್ತ್ರ ಚಿಕಿತ್ಸೆಯೂಗಬೇಕು ಎಂದು ವೈದ್ಯರು ಹೇಳಿದರು. ಈ ವಿಷಯ
ವನ್ನು ಮಹಾರಾಜರ ಗಮನಕ್ಕೆ ತಂದಾಗ ನನ್ನನ್ನು ಕರೆಸಿ ವಿಷಯವನ್ನೆಲ್ಲ ಹೇಳಿ
ಇದಕ್ಕೆ ನಿಮ್ಮಲ್ಲಿ ಏನಾದರೂ ಚಿಕಿತ್ಸೆ ಇದೆಯೇ ಎಂದು ಕೇಳಿದರು. ಆಕೆಯನ್ನು
ಮನೆಗೆ ಕರೆತಂದರೆ ಸುಖವಾಗಿ ಪ್ರಸವವಾಗುವ ಔಷಧಿಯನ್ನು ಕೊಡುತ್ತೇನೆ ಎಂದು
ಹೇಳಿದೆ. ನನ್ನ ಮೇಲೆ ನಂಬಿಕೆ ಇಟ್ಟು ಸ್ಥಳೀಯ ಆಸ್ಪತ್ರೆಯಿಂದ ತುಂಬಿದ ಗರ್ಭಿಣಿ
ಯನ್ನು ಮನೆಗೆ ಕರೆತಂದರು. ಅರಮನೆಯ ಮುಂಭಾಗದಲ್ಲಿಯೇ ಬೆಳೆದು ನಿಂತಿದ್ದ
ಆಡುಸೋಗೆ ಬೇರನ್ನು ತಂದು ಕುಟ್ಟಿ ರಸವನ್ನು ಹಿಂಡಿ ಸುಮಾರು 2 ಚಮಚ
ದಷ್ಟನ್ನು ಕುಡಿಸಿದೆ. ರಸ ಕುಡಿದ 20 ನಿಮಿಷದೊಳಗಾಗಿ ಪರಮಾತ್ಮನ ದಯ
ದಿಂದ ಆಕೆಗೆ ಗಂಡುಮಗು ಜನನವಾಯಿತು. ಎಲ್ಲರಿಗೂ ತುಂಬ ಆಶ್ಚರ್ಯವಾ
ಯಿತು. ಈ ಪ್ರಯೋಗವನ್ನು ಅಲ್ಲಿಯ ವೈದ್ಯರಿಗೂ ಹೇಳಿದೆ. ಆ ಮಗು ನಾಮ
ಕರಣದಲ್ಲಿ "ಮೈಸೂರು ಪಂಡಿತ್‌ಜಿ" ಎಂದು ಹೇಳಿ 101 ರೂಪಾಯಿ ಬಹು
ಮಾನ ಕೊಟ್ಟು ರಾಜರು ಗೌರವಿಸಿದರು. (ಇದೆಲ್ಲಾ ನನ್ನ ಗುರುಗಳ ಆಶೀರ್ವಾದ).

ಆಡುಸೋಗೆಯ ಒಂದು ಹಿಡಿ ಎಲೆಗಳನ್ನು ಕುಟ್ಟಿ ಎರಡು ಲೋಟ ನೀರಿನಲ್ಲಿ
ಹಾಕಿ ಮಣ್ಣಿನ ಪಾತ್ರೆಯಲ್ಲಿ ಕಾಯಿಸಿ ಒಂದು ಲೋಟದಷ್ಟಕ್ಕೆ ಭಟ್ಟಿ ಇಳಿಸಿ
ಅದಕ್ಕೆ ಎರಡು ಚಮಚ ಜೇನು ಹಾಕಿ ಬೆಳಿಗ್ಗೆ ಅರ್ಧ ಲೋಟ, ಸಾಯಂಕಾಲ
ಅರ್ಧಲೋಟ 40 ದಿವಸಗಳು ಕುಡಿಯುತ್ತಾ ಬಂದರೆ ಅಸ್ತಮಾಕ್ಷಯ-ಶ್ವಾಸಕಾಸ
ರಕ್ತಕಾಸ-ಛಳಿಜ್ವರ-ಶೀತಸಂಬಂಧವಾದ ನೋವುಗಳು, ಸರ್ವ ಮೂಳೆಗಳ ನೋವು
ಮುಂತಾದುವುಗಳ ಹುಟ್ಟೇ ಅಡಗಿ ಹೋಗುತ್ತನೆ.

ಇದರ ಎಲೆ, ಬೇವಿನ ಎಲೆ ಸಮಭಾಗ ಹಾಕಿ ನೀರಿನಲ್ಲಿ ಬೇಯಿಸಿ ಕಿಬ್ಬೊ
ಟ್ಟೆಗೆ ಶಾಖ ಕೊಡುವುದರಿಂದ ಮತ್ತು ಆಡುಸೋಗೆ ಸೊಪ್ಪಿನ ರಸ ಮಾತ್ರ 5 ಗ್ರಾಂ
ನಷ್ಟು ಇದಕ್ಕೆ ಅಷ್ಟೇ ಜೇನುತುಪ್ಪ ಬೆರಸಿ ಹೊಟ್ಟೆಗೆ ತೆಗೆದುಕೊಂಡರೆ ಮೂತ್ರಪಿಂಡ
ಅಥವಾ ಮೂತ್ರಾಶಯದ ನೋವು ತೀವ್ರಗತಿಯಿಂದ ಗುಣವಾಗುತ್ತದೆ.

ಆಡುಸೋಗೆಗೆ ತುಂಬಾ ಮಿತ್ರಮೂಲಿಕೆಗಳಿವೆ. ಇವುಗಳು ಇದರ ಜೊತೆ
ಸೇರವುದರಿಂದ ನಾನಾ ಬಗೆಯ ವ್ಯಾಧಿಗಳು ಹರವಾಗುತ್ತವೆ.

ಆಡುಸೋಗೆ ಎಲೆ 100ಗ್ರಾಂ, ಇದರ ಬೇರು 25ಗ್ರಾಂ, ಈ ಎರಡನ್ನೂ
ಚೆನ್ನಾಗಿ ಒಣಗಿಸಿ ಕುಟ್ಟಿ ವಸ್ತ್ರಗಾಲಿತ ಮಾಡಿ ಒಂದು ಗಾಜಿನ ಸೀಸೆಯಲ್ಲಿಟ್ಟು

ಕೊಂಡು 10 ಭತ್ತದ ಕಾಳಿನ ತೂಕ ಈ ಚೂರ್ಣವನ್ನು ದಿನವೊಂದಕ್ಕೆ ಎರಡು ವೇಳೆ ಬಿಸಿನೀರಿನಲ್ಲಿ ಬಿಡದೆ ಕೆಲವು ದಿವಸಗಳು ತೆಗೆದುಕೊಂಡರೆ ನರಗಳ ಎಳೆತ, ಶ್ವಾಸಕಾಸ, ಸನ್ನಿ, ಜ್ವರ, ಸೆಳೆತ, ಕೆಮ್ಮು, ಚಳಿಜ್ವರ ಮತ್ತು ಆರಂಭ ಕ್ಷಯ, ಶರೀರದ ಅಂಗಾಂಗಗಳ ನೋವು ಇವೆಲ್ಲವೂ ಶಾಂತವಾಗುತ್ತವೆ.

ಆಡುಸೋಗೆ ಎಲೆ ಎರಡು ಕೈ ಹಿಡಿ ತಂದು ಮಣ್ಣಿನ ಪಾತ್ರೆಯಲ್ಲಿ ಹಾಕಿ ಎರಡುಲೋಟ ನೀರುಹಾಕಿ ಕಾಯಿಸಿ ಅರ್ಧಕ್ಕೆ ಇಳಿಸಿಕೊಂಡು ಬೆಳಿಗ್ಗೆ-ಸಾಯಂ ಕಾಲ ಕುಡಿಯುತ್ತಾ ಬಂದರೆ ಆರಂಭ ಕುಷ್ಠ-ಹುಳುಕಡ್ಡಿ-ಕರಪಾಣಿ-ಮೇಹಪಡೆ-ಬಿಕ್ಕಳಿಕೆ-ವಾಂತಿ-ಹೊಟ್ಟೆನೋವು ಮುಂತಾದುವುಗಳು ನಿವಾರಣೆಯಾಗುತ್ತವೆ.

ಆಡುಸೋಗೆ ಎಲೆಯ ರಸ ೧ಸೇರು, ಅರ್ಧಸೇರು ಸಕ್ಕರೆ, ೧೦೦ಗ್ರಾಂ ಹಸುವಿನ ತುಪ್ಪ ಇವುಗಳನ್ನು ಕೂಡಿಸಿ ಒಲೆಯ ಮೇಲಿಟ್ಟು ಸಣ್ಣ ಉರಿಯಿಂದ (ಮಂದಾಗ್ನಿ) ಕಾಯಿಸಿ ಒಂದು ಹದಕ್ಕೆ ಬಂದಮೇಲೆ ಕೆಳಕ್ಕೆ ಇಳಿಸಿ ತಣ್ಣಗಾದಮೇಲೆ ೧೦೦ಗ್ರಾಂ ಹಿಪ್ಪಲಿಯ ಚೂರ್ಣವನ್ನು ಹಾಕಿ ಚೆನ್ನಾಗಿ ಕಲೆಸಿ ಬೇರೆ ಪಾತ್ರೆಗಾಗಲಿ ಅಥವಾ ಸೀಸೆಯಲ್ಲಾಗಲೀ ಹಾಕಿ ಇಟ್ಟುಕೊಳ್ಳಬೇಕು. ಇದನ್ನು ಕೆಮ್ಮು ದಮ್ಮು ರೋಗಿಗಳಿಗೂ, ಮೂಗು,ಬಾಯಿ ಮತ್ತು ಆಸನದಿಂದ ರಕ್ತ ಬೀಳುತ್ತಿರುವವರಿಗೂ, ಕ್ಷಯ ರೋಗ ಮತ್ತು ಹೃದ್ರೋಗಿಗಳಿಗೂ ಅಮೃತ ಸಮಾನವಾದ ದಿವ್ಯೌಷಧವಾಗಿರುತ್ತದೆ. ದೊಡ್ಡವರಿಗೆ ದಿನವೊಂದಕ್ಕೆ ೩ವೇಳೆ ಒಂದೊಂದು ಚಮಚದಂತೆಯೂ, ಮಕ್ಕಳಿಗೆ-ಹುಡುಗರಿಗೆ ಪ್ರಮಾಣ ಕಡಿಮೆಮಾಡಿ ಕೊಡಬೇಕು.

**ವೈದ್ಯಮಾತಾ ಷರಬತ್ತು:** ಆಡುಸೋಗೆ ಚಿಗುರು ಎಲೆಗಳು 50ಗ್ರಾಂ ತಂದು ಚೆನ್ನಾಗಿ ಒರೆಸಿ ಚಾಕುವಿನಿಂದ ಸಣ್ಣ ಸಣ್ಣ ಚೂರುಗಳನ್ನಾಗಿ ಮಾಡಿಟ್ಟುಕೊಳ್ಳಬೇಕು. ಅನಂತರ ಅಕ್ಕಲಕರೆ 5ಗ್ರಾಂ, ಅತಿ ಮಧುರ 10 ಗ್ರಾಂ, ಮೆಣಸು, ಹಿಪ್ಪಲಿ, ಶುಂಠಿ ಈ ಮೂರೂ 2½, 2½ ಗ್ರಾಂ, ಲವಂಗದ ಹೂ5ಗ್ರಾಂ, ಏಲಕ್ಕಿ 5ಗ್ರಾಂ ಇವುಗಳನ್ನು ತಂದು ಒಂದು ದಿನ ಬಿಸಿಲಿನಲ್ಲಿ ಒಣಗಿಸಿ ಬೇರೆ ಬೇರೆ ಕುಟ್ಟಿ ಚೂರ್ಣಿಸಿ ಅನಂತರ ಎಲ್ಲವನ್ನೂ ಒಟ್ಟಿಗೆ ಸೇರಿಸಿ ಇಟ್ಟುಕೊಳ್ಳಬೇಕು. ಮೇಲ್ಕಂಡ ಮೊದಲೆ ಸಿದ್ಧಮಾಡಿಟ್ಟುಕೊಂಡಿರುವ ಆಡುಸೋಗೆ ಎಲೆಯ ಚೂರುಗಳನ್ನು ಒಂದು ಮಣ್ಣಿನ ಪಾತ್ರೆಯಲ್ಲಿ ಸ್ವಲ್ಪ ತುಪ್ಪ ಹಾಕಿ ಚೆನ್ನಾಗಿ ಹುರಿಯಬೇಕು. ಹೀಗೆ ಹುರಿಯುವಾಗ ಸುವಾಸನೆ ಬಂದ ಕೂಡಲೇ ಮೇಲ್ಕಂಡ ಸಾಮಾನುಗಳ ಚೂರ್ಣವನ್ನು ಹಾಕಿ ಚೆನ್ನಾಗಿ ತಿರುವಬೇಕು. ಸುಮಾರಾಗಿ ತಿರುವಿ ನಂತರ 1 ಸೇರಿನಷ್ಟು ನೀರನ್ನು ಹಾಕಿ ಕಲಸಿ ಒಂದುಕುದಿ ಬಂದಮೇಲೆ ¾ಕೆ.ಜಿ. ಸಕ್ಕರೆ ಹಾಕಿ ಚೆನ್ನಾಗಿ ಕಲಸಿ, ಕುದಿಸಿ ಸುಮಾರಾಗಿ ಮಂದವಾದಮೇಲೆ ಕೆಳಕ್ಕೆ ಇಳಿಸಿ ಇಡಬೇಕು. ಆರಿದ ಮೇಲೆ ಶೋಧಿಸಿ ಒಂದು ಸೀಸೆಯಲ್ಲಿ ಇಟ್ಟುಕೊಳ್ಳಬೇಕು.



ಈ ಷರಬತ್ತನ್ನು ಉಪಯೋಗಿಸುವ ವಿಧಾನ: ಈ ಷರಬತ್ತು 2 ಚಮಚ 4 ಚಮಚ ಬಿಸಿನೀರಿನಲ್ಲಿ ಹಾಕಿ ದಿನವೊಂದಕ್ಕೆ ಎರಡು ವೇಳೆ ಕುಡಿಯಲು ಉಪಯೋಗಿಸಬೇಕು. ಆದರೆ ಮಕ್ಕಳಿಗೆ ಹುಡುಗರಿಗೆ ಅಳತೆಯ ಔಷಧದ ಪ್ರಮಾಣ ಕಡಿಮೆ ಮಾಡಿ ವಯೋಧರ್ಮವನ್ನು ನೋಡಿಕೊಂಡು ಕೊಡಬೇಕು.

ಆಗಾಗ್ಗೆ ನೆಗಡಿಯಾಗಿ ಸೀನುಗಳು ಬರುವುದು, ವಿಪರೀತವಾದ ಕೆಮ್ಮಿನಿಂದ ಬಾಧೆ ಪಡುವವರು ಮತ್ತು ಶೀತಸಂಬಂಧವಾದ ಜ್ವರವುಳ್ಳವರು ಈ ಷರಬತ್ತನ್ನು ಬಿಸಿನೀರಿನಿಂದ ತೆಗೆದುಕೊಳ್ಳಲು ಗುಣವಾಗುವುದು.

ಕಾಸರೋಗ-ಕ್ಷಯ-ಛಳಿ-ಕಫ-ಕೆಮ್ಮು ಇವುಗಳಿಂದ ಬಾಧೆಪಡುವವರು ಮತ್ತು ಎದೆ ಮತ್ತು ಪಕ್ಕೆಗಳಲ್ಲಿ ಸೂಜಿಯಿಂದ ಚುಚ್ಚಿದಹಾಗೆ ಉಂಟಾಗುವ ನೋವು ನೀರು ಸೇರಿದ್ದು ನೋವುಂಟಾಗುವಿಕೆ ಮತ್ತು ಹಳೆಯ ಅಸ್ತಮಾ ಮುಂತಾದುವುಗಳಿಗೆ ಪ್ರತಿದಿನ 3ವೇಳೆ ಸೇವಿಸುತ್ತಾ ಬಂದರೆ ಮೇಲ್ಕಂಡ ರೋಗಗಳೆಲ್ಲಾ ಗುಣವಾಗುತ್ತವೆ.

ಗಂಟಲು ನೋವು, ಗಂಟಲು ಎಳೆತ, ಮಾತನಾಡುವಾಗ ಗಂಟಲಿನಿಂದ ಶಬ್ದವೇ ಬಾರದಿರುವಿಕೆ, ಇವುಗಳಿಗೆ ಈ "ವೈದ್ಯಮಾತಾ ಷರಬತ್ತು" ಒಳ್ಳೆಯ ಫಲಪ್ರದವಾದುದಾಗಿದೆ, ಮತ್ತು ಸಂಗೀತಗಾರರಿಗೂ ಸಹ ಶಾರೀರಕ್ಕೆ ತುಂಬ ಪ್ರಯೋಜನಕರವಾಗಿ ಸುಮಧುರವಾದ ಧ್ವನಿಯನ್ನು ಉಂಟುಮಾಡುತ್ತದೆ.

ಲಕ್ವ, ಚಿಕ್ಕಮಕ್ಕಳ ವಾತಸಂಬಂಧವಾದ ರೊಗಗಳು, ಕಾಲು ಮತ್ತು ಮೊಣಕಾಲು ನೋವು, ಮತ್ತು ಸೊಂಟದ ತಳಭಾಗದ ಪಾರ್ಶ್ವವಾಯು ಇವುಗಳ ಬಾಧೆಯನ್ನು ಪರಿಹರಿಸುವುದರಲ್ಲಿ ಬಹಳ ಉತ್ತಮವಾದ ಪರಿಣಾಮವು ತೋರಿಬಂದಿರುತ್ತದೆ.

ನ್ಯೂಮೋನಿಯಾ, ಮತ್ತು ರಕ್ತ ಸಂಬಂಧವಾದ ಅಸ್ತಮಾ-ಕ್ಷಯ ಮುಂತಾದ ರೋಗಗಳನ್ನೂ ಸಹ ತುಂಬಾ ಆಶ್ಚರ್ಯಕರವಾಗಿ ಗುಣಪಡಿಸುವುದರಿಂದ ಈ ಆಡುಸೋಗೆಗೆ "ವೈದ್ಯಮಾತಾ ವನಸ್ಪತಿ" ಎಂಬುದಾಗಿ ಅನುವಂಶಿಕ ಆಯುರ್ವೇದ ವೈದ್ಯರು ಹೊಗಳುತ್ತಿದ್ದಾರೆ.

ಆಡುಸೋಗೆ ಎಲೆ 1 ಸೇರು, 8 ಸೇರು ನೀರಿನೊಂದಿಗೆ ಕುದಿಸಿ 2 ಸೇರು ಭಟ್ಟಿ ಇಳಿಯುವಂತೆ ಕಾಯಿಸಿ ಶೋಧಿಸಿ ಇದಕ್ಕೆ 4 ಸೇರು ಬೆಲ್ಲ ಹಾಕಿ 50 ಗ್ರಾಂ ಧಾತಕೀ ಕುಸುಮ ಮತ್ತು ದಾಲ್ಚಿನ್ನಿ ಏಲಕ್ಕಿ, ಲವಂಗಪತ್ರೆ, ನಾಗಕೇಸರಿ, ಬಾಲಮೆಣಸು, ಶುಂಠಿ, ಹಿಪ್ಪಲಿ, ಮೆಣಸು ತುಂಗೆಗಡ್ಡೆ ಪ್ರತಿಯೊಂದೂ 5 ಗ್ರಾಂ ಪ್ರಕಾರ ಚೂರ್ಣಿಸಿ ಕಷಾಯದಲ್ಲಿ ಹಾಕಬೇಕು. ನಂತರ ಒಂದು ಮಣ್ಣಿನ ಭಾಂಡದಲ್ಲಿ ಕಷಾಯವನ್ನು ಹಾಕಿ ಮೇಲೆ ಕೆಮ್ಮಣ್ಣು ಬಟ್ಟೆ ಸುತ್ತಿ ಬಾಯಿ ಭದ್ರವಾಗಿ ಕಟ್ಟಿ 15 ದಿನಗಳವರೆಗೆ ಭೂಮಿಯಲ್ಲಿ ಹೂತಿದ್ದು 16ನೇ ದಿನ ತೆಗೆದು ಶೋಧಿಸಿಕೊಂಡು ಒಂದು ಗಾಜಿನ ಸೀಸೆಯಲ್ಲಿ ಇರಿಸಬೇಕು. ಊಟವಾದ ನಂತರ 10ರಿಂದ 15ಗ್ರಾಂ ವರೆಗೆ ಇದಕ್ಕೆ ಸ್ವಲ್ಪ ಬಿಸಿನೀರನ್ನು ಬೆರಸಿಯಾದರೂ ಅಥವಾ ಹಾಗೆಯೇ ಆದರೂ ಕುಡಿಯಬೇಕು.

ಇದರಿಂದ ಪಾಂಡುರೋಗ-ಜಲೋದರ-ಕ್ಷಯ-ಕೆಮ್ಮುಗಳಿಗೆ ಉತ್ತಮವಾದ ಔಷಧಿಯಾಗಿ ಈ ಎಲ್ಲಾ ರೋಗಗಳನ್ನೂ ಗುಣಪಡಿಸುತ್ತದೆ. ಪ್ರಬಲವಾದ ರೋಗವಾಗಿದ್ದರೆ ನೀರನ್ನು ಸೇರಿಸದೆ ಊಟಕ್ಕೆ ಮೊದಲು, ಮಧ್ಯಾಹ್ನ ಮತ್ತು ರಾತ್ರಿ ಸೇವಿಸಬೇಕು.

ಮಳೆ,ಛಳಿಗಾಲಗಳಲ್ಲಿ ಅಸ್ತಮ, ಉಬ್ಬಸ ರೋಗದವರುಗಳಿಗೆ ಎದೆಯಲ್ಲಿ ವಿಪರೀತ ಕಫವು ಶೇಖರವಾಗಿರುತ್ತದೆ. ಅಂಥಹವರು ಉಸಿರಾಡುವುದಕ್ಕೂ ಸಹ ಬಹಳ ಬಾಧೆ ಪಡುತ್ತಿರುತ್ತಾರೆ- ಅಂಥಹವರಿಗೆ ತಕ್ಷಣ ಶಾಂತವಾಗಬೇಕಾದರೆ ಆಡುಸೋಗೆ ಎಲೆಯನ್ನು ತಂದು ಚೆನ್ನಾಗಿ ಒಣಗಿಸಿ ಕುಟ್ಟಿ ಧೂಳುಮಾಡಿ ಇಟ್ಟುಕೊಂಡು ಇದ್ದು ಮೇಲ್ಕಂಡ ತೊಂದರೆ ಕಂಡುಬಂದ ಕೂಡಲೇ ಸ್ವಲ್ಪ ಈ ಧೂಳನ್ನು ಗುಡುಗುಡಿ ಸೇದುವ ಕೊಳವಿಗೆ ಹಾಕಿ ಅಥವಾ ಉಮ್ಮತ್ತಿ ಎಲೆಯಲ್ಲಾದರೂ ಬೀಡಿಕಟ್ಟಿದ ಹಾಗೆ ಸುತ್ತಿ ಅದರಲ್ಲಿಯಾದರೂ ಈ ಪುಡಿ ಹಾಕಿ ಕಟ್ಟಿ ಸೇದಿದರೆ ಆ ಕೂಡಲೇ ಯಾವ ತಡೆಯೂ ಇಲ್ಲದೆ ಕಫ ಹೊರಗೆ ಬಂದು ಉಸಿರಾಟವು ಸುಗಮವಾಗಿ ನಡೆಯುತ್ತದೆ. ಇದನ್ನು ಸ್ವತಃ ಉಪಯೋಗಿಸಿ ನೋಡಿದಾಗ ಅದರ ಮಹತ್ವ ಮನದಟ್ಟಾಗುತ್ತದೆ.

**ಮಕ್ಕಳ ನಾಯಿಕೆಮ್ಮಿಗೆ:—** 50ಗ್ರಾಂ ಆಡುಸೋಗೆ ಎಲೆಯ ರಸಕ್ಕೆ 50ಗ್ರಾಂ ನೀರನ್ನು ಬೆರಸಿ 5 ಹಲಕು ಬೆಳ್ಳುಳ್ಳಿಯನ್ನು ಜಜ್ಜಿಹಾಕಿ 50ಗ್ರಾಂ ಕಲ್ಲುಸಕ್ಕರೆ ಪುಡಿಯನ್ನು ಹಾಕಿ, ಪಾಕ ಬರುವವರೆಗೆ ಕುದಿಸಿ ಆರಿದ ಮೇಲೆ ಒಂದು ಸೀಸೆಯಲ್ಲಿ ಇಟ್ಟುಕೊಳ್ಳಬೇಕು. ನಂತರ ಬೇಕಾದಾಗ ನಾಯಿಕೆಮ್ಮು ಇರುವ ಮಕ್ಕಳಿಗೆ 5 ತೊಟ್ಟಿನಿಂದ 15 ತೊಟ್ಟಿನವರೆಗೂ ವಯೋಧರ್ಮವನ್ನು ನೋಡಿ ದಿನವೊಂದಕ್ಕೆ 3 ವೇಳೆ ಔಷಧಿ ಕೊಡಬೇಕು. ಇದರಿಂದ ನಾಯಿಕೆಮ್ಮು ಬಹು ಜಾಗ್ರತೆಯಾಗಿ ಗುಣವಾಗುತ್ತದೆ. ನಿಸ್ಸಂದೇಹವಾಗಿ ಈ ಕೆಮ್ಮಿಗೆ ಕೊಡಬಹುದಾಗಿದೆ.

ಈ ಆಡುಸೋಗೆಯು ಅಸ್ತಮ (ಉಬ್ಬಸದ) ಉತ್ಪತ್ತಿಗೆ ಮೂಲ ಕಾರಣವಾದ ವಾತ ಕಫ ಮತ್ತು ಪ್ರದೋಷಾದಿಗಳಿಗೆ ಅತಿ ತೀವ್ರ ಗತಿಯಿಂದ ಗುಣಪಡಿಸುವುದಾಗಿರುತ್ತದೆ.

ಈ ಔಷಧಿಯನ್ನು ಸೇವಿಸುವಾಗ ಎಣ್ಣೆಯಲ್ಲಿ ಕರಿದ ತಿಂಡಿಗಳು-ಮೊಸರು ಉದ್ದು-ಕಡಲೆಬೇಳೆ-ಸಿಹಿ ತಿಂಡಿಗಳು ಮತ್ತು ಮಸಾಲೆ ಸಾಮಾನುಗಳನ್ನು ಸರ್ವಥಾ ಉಪಯೋಗಿಸಲೇಬಾರದು. ಉಷ್ಣಪ್ರಕೃತಿಯುವರು, ಕಫವಿಲ್ಲದೆ ಒಣ ಕೆಮ್ಮು ಉಬ್ಬಸಗಳಿಂದ ಬಳಲುತ್ತಿರುವವರು ಒಳ್ಳೆಯ ಹಾಲು ತುಪ್ಪ ಅನುಪಾನದೊಡನೆ ಸೇವಿಸಬೇಕು.

ಆದ್ದರಿಂದ ಈ ಆಡುಸೋಗೆಯ ಮಹತ್ವವನ್ನು ಆಯುರ್ವೇದೀಯ ಅನುವಂಶಿಕ ವೈದ್ಯರುಗಳು ಅರಿತು ಅದರ ಉತ್ಕೃಷ್ಟವಾದ ಪ್ರಯೋಜನವನ್ನು ಜನಸಮುದಾಯಕ್ಕೆ ಹಂಚಿ ಅನೇಕ ವಿಧವಾದ ರೋಗಗಳನ್ನು ಗುಣಪಡಿಸುವ ಸಾಮರ್ಥ್ಯವನ್ನು ಪಡೆದ್ದಿರುತ್ತಾರೆ.



# "ಹೊಟ್ಟೆ ಕಿಚ್ಚು"

ಎಚ್. ಎಸ್. ಸಿದ್ಧಗಂಗಪ್ಪ ಎಂ. ಎ,

ಸಮಾಜದಲ್ಲಿ ಹೊಟ್ಟೆ ಕಿಚ್ಚು ಪಡದೆ ಇರುವವರು ತುಂಬಾ ವಿರಳ. ಆದಿಮಾನವನಿಂದ ಹಿಡಿದು ಇಂದಿನವರೆಗೂ ತಲೆತಲಾಂತರದಿಂದ ರಕ್ತಗತವಾಗಿ ಹರಿದು ಬಂದಿರುವ ಈ ಗುಣ ಎಷ್ಟು ಜನ ನಿರಪರಾಧಿಗಳನ್ನು ಸಂಕಷ್ಟಗಳಿಗೆ ಗುರಿಮಾಡಿದೆಯೋ; ದ್ವೇಷ, ಅಸೂಯೆ' ಮತ್ಸರ ಇವುಗಳ ವಿಷ ವರ್ತುಲದಲ್ಲಿ ಸುತ್ತುತ್ತಿರುವ ವ್ಯಕ್ತಿಗಳೇ ತುಂಬಿರುವಾಗ ಇವುಗಳ ವಕ್ರದೃಷ್ಟಿಗೆ ಸಿಲುಕದ ಜನರು ನಿಜಕ್ಕೂ ಆದರ್ಶ ವ್ಯಕ್ತಿ. ಅಂಥವರ ಜೀವನ ಇತರರಿಗೆ ಮಾರ್ಗದರ್ಶಿ.

ಕಿಚ್ಚು ಯಾವಾಗಲೂ ಅಪಾಯಕಾರಿ. ಒಂದು ರೀತಿಯಲ್ಲಿ ಹಾಲಿಟ್ಟು ವಿಷದ ಸರ್ಪವನ್ನು ಸಾಕಿದಂತೆ. ಸ್ವಲ್ಪ ಎಚ್ಚರ ತಪ್ಪಿದರೂ ಸಾಕು ಅದರಿಂದ ಅಪಾಯ ಕಟ್ಟಿಟ್ಟಬುತ್ತಿ. ಅಂತೆಯೆ ಕಿಚ್ಚು ಸಹ ಅದು ತನ್ನ ವಾಪ್ತಿಗೆ ಬರುವ ಸಮಸ್ತ ವಸ್ತುವನ್ನು ದಹಿಸುತ್ತದೆ. ಆ ಸಮಯದಲ್ಲಿ ಅದಕ್ಕೆ ಯಾವುದನ್ನು ಸುಡಬೇಕು, ಯಾವುದನ್ನು ಬಿಡಬೇಕು ಎಂಬುದರ ಔಚಿತ್ಯ ಪ್ರಜ್ಞೆ ಇರುವುದಿಲ್ಲ, ಅದು ಕ್ಷಣ ಮಾತ್ರದಲ್ಲಿ ಎಲ್ಲವನ್ನು ಸುಟ್ಟು ನಿರ್ನಾಮ ಮಾಡುತ್ತದೆ. ಆದರೆ ಈ ಕಿಚ್ಚನ್ನು ಜನೋಪಯೋಗಕ್ಕಾಗಿಯೂ ಬಳಸಿಕೊಳ್ಳಬಹುದು. ವಿನಾಶಕ್ಕೂ ಬಳಸಿಕೊಳ್ಳಬಹುದು.

ಆದರೆ ವ್ಯಕ್ತಿಯ ಒಳಗೆ ಸದಾ ಗುಪ್ತಗಾಮಿಯಾಗಿ ಉರಿಯುತ್ತಿರುವ ಒಡಲಾಗ್ನಿಯನ್ನು ಆರಿಸುವುದು ಕಷ್ಟ. ಹೊರನೋಟಕ್ಕೆ ಗೋಚರಿಸದ ಹೊಟ್ಟೆಯೊಳಗಿನ ಕಿಚ್ಚು ಯಾವಾಗ, ಯಾರ ಮೇಲೆ ತನ್ನ ಕಿಚ್ಚಿನ ಪ್ರಖರತೆ ಹಾಗೂ ಭೀಕರತೆಯ ಪರಿಣಾಮವನ್ನುಂಟು ಮಾಡುತ್ತದೆಯೋ ಗೊತ್ತಾಗುವುದಿಲ್ಲ. ಯಾರ ಒಡಲಲ್ಲಿ ಕಿಚ್ಚು ಹತ್ತಿರುತ್ತದೆಯೋ ಅವರೇ ಪ್ರಯತ್ನ ಪಟ್ಟರೆ ಆರಿಸಬಹುದು. ಆದರೆ ಅದು ಹೊಗೆಯಾಡುವ ಮುನ್ನವೇ ನಂದಿಸಿದರೆ ಮುಂದೆ ಒದಗಬಹುದಾದ ಅನಾಹುತಗಳನ್ನು ತಪ್ಪಿಸಬಹುದು.

ಒಬ್ಬ ವ್ಯಕ್ತಿ ಮತೊಬ್ಬ ವ್ಯಕ್ತಿಯ ಮೇಲೆ ಹೊಟ್ಟೆ ಕಿಚ್ಚು ಪಡುವುದಕ್ಕೆ ಇಂತಹದೇ ಕಾರಣ ಎನ್ನುವಂತಿಲ್ಲ. ಒಬ್ಬ ವ್ಯಕ್ತಿಯ ಸರ್ವತೋಮುಖ ಅಭಿವೃದ್ಧಿಯನ್ನು ಕಂಡು ಸಹಿಸಲಾರದೆ, ಅವನೇರಿದ ಎತ್ತರಕ್ಕೆ ತಾನೇರಲಾರದೆ, ಅವರ ಬಗ್ಗೆ ಹೊಟ್ಟೆ ಕಿಚ್ಚು ಪಡುವವರಿಗೆ ಸಮಾಜದಲ್ಲಿ ಕೊರತೆಯಿಲ್ಲ. ಅವರನ್ನು ಹುಡುಕಿಕೊಂಡು ಎಲ್ಲೂ ಹೋಗಬೇಕಾಗಿಲ್ಲ. ನಮ್ಮ ಸುತ್ತ ಮುತ್ತ ನಾಯಿ ಕೊಡೆಗಳಂತೆ ವ್ಯಾಪಿಸಿದ್ದಾರೆ. ಒಬ್ಬ ವ್ಯಕ್ತಿಯ ಮೇಲೆ ಇರುವ ಹೊಟ್ಟೆ ಕಿಚ್ಚನ್ನು ಪ್ರತ್ಯೇಕವಾಗಿ, ಪರೋಕ್ಷವಾಗಿ ಕಾರುತ್ತಾರೆ. ಕೈಲಾಗದವನು ಮೈಪರಚಿಕೊಂಡಂತೆ, ತಮ್ಮಲ್ಲಿ ಕುದಿಯುತ್ತಿ

ರುವ ಅಸುಯೆ, ದ್ವೇಷವನ್ನು ಮಾತಿನ ಮೂಲಕ ಹೊರಗೆಡಹುತ್ತಾರೆ. ಇದರಿಂದ ತಾತ್ಕಾಲಿಕವಾಗಿ ಅವರಿಗೆ ಸಂತೋಷವಾದರು ಅದೇ ಸಂತೋಷ ಕ್ರಮೇಣ ಅವರಿಗೆ ಮಾರಕವಾಗುತ್ತದೆ. ಎಂಬುದು ಗೊತ್ತಾಗುವುದಿಲ್ಲ.

ತನ್ನ ಸಹೋದ್ಯೋಗಿಯೊಬ್ಬ ಒಳ್ಳೆಯ ನಡತೆಯಿಂದ ಎಲ್ಲರ ಪ್ರೀತಿಗೆ ಪಾತ್ರನಾದರೆ ಪಕ್ಕದ ಮನೆಯವರು ಒಳ್ಳೆ ಬಟ್ಟೆ ಹಾಕಿದರೆ, ವಸ್ತುಗಳನ್ನು ಕೊಂಡು ತಂದರೆ ಅವರು ತಮ್ಮ ಪರಿಶ್ರಮದಿಂದ ಶ್ರೀಮಂತರಾದರೆ, ಅವರನ್ನು ನೋಡಿ ಅವರ ಬಗ್ಗೆ ಕೆಂಡಕಾರುವುದು, ಹೀಯಾಳಿಸುವುದು, ಇಲ್ಲದ, ಸಲ್ಲದ ಅರೋಪಗಳನ್ನು ಹೊರಿಸುವುದು, ಇತ್ಯಾದಿಗಳಿಗೆ ದಿನದ ಬಹುತೇಕ ವೇಳೆಯನ್ನು ಮಿಸಲಾಗಿಡುತ್ತಾರೆ. ಇಂಥವರನ್ನು ಕಂಡೇ ಇರಬೇಕು, ಡಿ. ವಿ. ಜಿ. ಅವರು ಒಂದು ಕಡೆ

ಅವರೆಷ್ಟು ಧನವಂತರೆ ಇವರೆಷ್ಟು ಬಲವಂತರೆ
ಅವರೆಷ್ಟು ಯಶವಂತರೆ ಎನುವ ಕರುಬಿನಲಿ
ಭವಿಕ ನಿನಗೆಷ್ಟಿಹುದೊ ಮರೆತು ನೀಂ ಕೊರಗುವುದು
ಶಿವನಿಗೆ ಕೃತಜ್ಞತೆಯೆ, ಮಂಕುತಿಮ್ಮ —ಎಂದಿದ್ದಾರೆ.

ಹೊಟ್ಟೆಯೊಳಗಿನ ಕಿಚ್ಚು ಬೇರೆಯವರನ್ನು ಸುಡುವುದಕ್ಕಿಂತ ಹೆಚ್ಚಾಗಿ ತನ್ನನ್ನೇ ಸುಡುತ್ತದೆ. ಬೇರೆಯವರಿಗೆ ಅದರ ತೀಕ್ಷ್ಣತೆ ಮುಟ್ಟುವ ಮುನ್ನವೇ ತನ್ನಲ್ಲಿರುವ ಶಾಂತಿ, ನೆಮ್ಮದಿ, ಸಂತೋಷವೆಲ್ಲವನ್ನು ದಹಿಸಿ ಹಾಳುಕೊಂಪೆಯನ್ನಾಗಿ ಮಾಡಿ ಇದರಿಂದ ಹೊಟ್ಟೆ ಕಿಚ್ಚು ಪಡುವ ವ್ಯಕ್ತಿ ಮಾನಸಿಕ ಹಾಗೂ ದೈಹಿಕ ದೌರ್ಬಲ್ಯಕ್ಕೆ ತುತ್ತಾಗುತ್ತಾನೆ. ತಮ್ಮ ಚಿಂತೆಯೇ ಹಾಸಿ ಹೊದಿಯುವಷ್ಟಿರುವಾಗ ಸದಾ, ಪರ ಚಿಂತೆಯಲ್ಲಿಯೇ ಕಾಲವನ್ನು ವ್ಯರ್ಥ ಮಾಡುತ್ತಾ ತೊಳಲಾಡುತ್ತಾರೆ. ಇದರಿಂದ ಅವರ ಬದುಕು ಹದಗೆಡುತ್ತದೆ. ಭವಿಷ್ಯ ಕರಾಳತೆಯ ವಶವಾಗುತ್ತದೆ. ಅಶಾಂತಿಯ ಬಿರುಗಾಳಿ ಬೀಸುತ್ತದೆ. ಎಲ್ಲಾ ದೃಷ್ಟಿಯಿಂದ ಅವರು ಕುಬ್ಜರಾಗುತ್ತಾರೆ. ಹೊಟ್ಟೆ ಕಿಚ್ಚಿನ ಬಗ್ಗೆ ಡಿ.ವಿ.ಜಿ. ಅವರು ತಮ್ಮ ಮಂಕುತಿಮ್ಮನ ಕಗ್ಗದಲ್ಲಿ,

ಹೊಟ್ಟೆಯೊಂದರ ರಗಳೆ ಸಾಲದೆಂದೇನೊ ವಿಧಿ
ಹೊಟ್ಟೆ ಕಿಚ್ಚಿನ ಕಿಡಿಯ ನೆಟ್ಟಿಹನು ನರನೊಳೆ
ಹೊಟ್ಟೆ ತುಂಬಿದ ತೋಳ ಮಲಗೀತು ನೀಂ ಪೆರರ
ದಿಟ್ಟಿಸುತ ಕರುಬುವೆಯೋ—ಮಂಕುತಿಮ್ಮ

ಬೇರೊಬ್ಬರ ಪ್ರಗತಿಯನ್ನು ಕಂಡು ಕರುಬುವುದನ್ನು ಬಿಟ್ಟು ಅವರ ಬಗ್ಗೆ ಮೆಚ್ಚುಗೆಯನ್ನು ವ್ಯಕ್ತಪಡಿಸಿ, ಅವರ ಸಂತೋಷದಲ್ಲಿ ತಾವು ಭಾಗವಹಿಸಿ ಅವರೇರಿದ ಎತ್ತರಕ್ಕೆ ತಾವು ಬೆಳೆಯಲು ಪ್ರಯತ್ನಿಸಿದರೆ ಬದುಕು ಬಂಗಾರವಾದೀತು. ಮನೆ ಮನ ನಂದನವನವಾದೀತು.



(9ನೇ ಪುಟದಿಂದ)

ಮೇಲೆ ಇನ್ನೊಂದು, ಮತ್ತೊಂದು, ಮಗುದೊಂದು; ಹೀಗೆ ತಿಂಗಳುಗಂಟ್ಟಲೆ ಆಗಾಗ ಕೆಲಸಕ್ಕೆ ಅಡೆತಡೆಗಳನ್ನು ಹುಟ್ಟಿಸಿ ಹಿಗ್ಗುವರು; ಎಷ್ಟು ದೀರ್ಘಕಾಲ ಕೆಲಸಕ್ಕೆ ತಡೆ ಹಾಕಿದರೆಂಬುದರ ಮೇಲೆ ಇವರ ಹಿರಿಮೆ, ಗರಿಮೆಗಳ ಅವಲಂಬನ;

ಇವರೇಕೆ ಹೀಗೆ ಮಾಡುತ್ತಾರೆ? ಇವರೆಲ್ಲರೂ ಸಿನಿಕರಾಗಿರಲಾರರು; ಸ್ವಭಾವತಃ ದುಷ್ಟಬುದ್ಧಿಗಳಾಗಿರಲಾರರು; ಪರಪೀಡನವೇ ಪುಣ್ಯ, ಪರೋಪಕಾರವೇ ಪಾಪವೆಂಬ ವಿಪರೀತಮತಿಯವರಾಗಿರಲಾರರು; ಅವರು ಮಾಡುವ ತಪ್ಪೆಂದರೆ ಅವರು ತಮ್ಮ ಮುಂದಿರುವ ಕಾಗದ ಬರಿ ಕಾಗದವೆಂದು ಭಾವಿಸುತ್ತಾರೆ; ಅವರ ಬಳಿ ಬರುವ ಪ್ರತಿಯೊಂದು ಕಾಗದದ ಹಿಂದೆ ಒಬ್ಬ ಮಾನವನೋ, ಹಲವು ಮಾನವರೋ ಇರುತ್ತಾರೆಂಬುದನ್ನು ಮರೆಯುತ್ತಾರೆ. ಅವರಲ್ಲಿ ಬಹುಸಂಖ್ಯಾತರು ಬಡವರು, ಬಾಯಿ ಇಲ್ಲದವರು, ಶೋಷಿತರು, ವಂಚಿತರು, ಉಳ್ಳವರ ತುಳಿತಕ್ಕೆ ಒಳಗಾದವರು! ಅವರ ಮುಖ ಆ ಕಾಗದದಲ್ಲಿ ಕಾಣದಿರಬಹುದು; ಆದರೆ ಅವರು ಚಡಪಡಿಸುವುದು; ನೀರವ ಮೊರೆ, ನಮ್ರ ನಿರೀಕ್ಷೆಗಳು ಸ್ವಲ್ಪವಾದರೂ ಹೃದಯವಂತಿಕೆಯಿರುವವರಿಗೆ ತಿಳಿಯದಿರಲಾರವು. ಈ ಹೃದಯವಂತಿಕೆ ಹೆಚ್ಚಿದಷ್ಟೂ ಕೆಲಸ ಕೆಡಿಸಿ ಹಿಗ್ಗುವುದು ಹೋಗಿ ಕೆಲಸ ಮಾಡಿ ಹಿಗ್ಗುವುದು ಹೆಚ್ಚುತ್ತದೆ.

ಎಲ್ಲ ಹಿಗ್ಗುಗಳಲ್ಲಿ ಹಿರಿದಾದ ಹಿಗ್ಗು ಹಿಡಿದ ಕೆಲಸವನ್ನು ಮಾಡಿ ಮುಗಿಸಿದಾಗ ದೊರೆಯುವ ಹಿಗ್ಗು. ಆ ಹಿಗ್ಗಿನಿಂದ ತಿಳಿದೋ ತಿಳಿಯದೆಯೋ ವಂಚಿತರಾಗುವವರ ಬಗ್ಗೆ ಕನಿಕರವೆನಿಸುತ್ತದೆ. ಹಿಡಿದ ಕೆಲಸ ಪೂರ್ಣವಾಗದಿದ್ದರೂ ಅದನ್ನು ಮಾಡಲು ಶಕ್ಯವಿರುವ ಎಲ್ಲ ಯತ್ನಗಳನ್ನೂ ಮಾಡಿದೆನೆಂಬ ತೃಪ್ತಿಯಿದ್ದರೆ ಸಾಕು. ಅದೂ ಆನಂದದ ಬುಗ್ಗೆಯಾಗುತ್ತದೆ. ಇಂಥ ಹಿಗ್ಗು, ಇಂಥ ತೃಪ್ತಿಗಳನ್ನು ಪಡೆಯುವ ಅವಕಾಶಗಳು ಸಾರ್ವಜನಿಕ ಆಡಳಿತದಲ್ಲಿರುವವರೆಗೆ ಪ್ರತಿನಿತ್ಯ ಲಭಿಸುತ್ತವೆ. ಆ ಅವಕಾಶಗಳನ್ನು ಕಳೆದುಕೊಳ್ಳದೆ ಅವುಗಳನ್ನು ಉಪಯೋಗಿಸಿಕೊಂಡು ಕೆಲಸ ಕೆಡಿಸಿ ಅಲ್ಲ, ಕೆಲಸ ಮಾಡಿ ಸುಖಿಸುವ ಸದ್ಬುದ್ಧಿ ಸಾರ್ವಜನಿಕ ಆಡಳಿತದಲ್ಲಿ ಮಾತ್ರವಲ್ಲ, ಎಲ್ಲೆಡೆಗಳಲ್ಲಿಯು ಬೆಳೆಯಲೆಂದು ಹಾರೈಸೋಣ.

---

ಶರಣನ ಚರಣದಲಿಲ್ಲ ನಡೆ ಪರುಷ
ಶರಣನ ಕರದಲ್ಲಿ ಹಸ್ತ ಪರುಷ
ಶರಣನ ಜಿಹ್ವೆಯಲ್ಲಿ ನುಡಿ ಪರುಷ
ಶರಣನ ನೇತ್ರದಲ್ಲಿ ನೋಟ ಪರುಷ
ನಮ್ಮ ಅಖಂಡೇಶ್ವರನ ಶರಣನ ಮನದಲ್ಲಿ
ಭಾವ ಪರುಷವಿರ್ಪುದು ನೋಡಿಕೋ

# ಕಾ ವ್ಯ ವಾ ಹಿ ನಿ

## ( ಗ ಣ ರಾ ಜ್ಯ )

ಗಣರಾಜ್ಯಕೆ ಜಯವೆನ್ನೋಣ ಗಣರಾಜ್ಯವ ಕಾಯೋಣ
ಬನ್ನಿರಿ ಗೆಳೆಯರೆ ಗಣರಾಜ್ಯಕೆ ಜಯವೆನ್ನೋಣ ಗಣರಾಜ್ಯವ ಕಾಯೋಣ॥
ಭಾರತೀಯ ಪ್ರಜಾರಾಜ್ಯೋತ್ಸವದ ವಾರ್ಷಿಕೋತ್ಸವದ ವಾರ್ಷಿಕೋತ್ಸವ
ಭಾರತಾಂಬೆಯು ಪೂರ್ಣ ಸ್ವಾತಂತ್ರ್ಯ ಪಡೆದ ಹಬ್ಬದ ರಥೋತ್ಸವ
ವರುಷ ವರುಷಕೂ ಹೆಚ್ಚು ಹೆಚ್ಚಿಗೆ ತಿಳಿದ ಪ್ರಜೆಗಳ ವೈಭವ
ಭಾರತದ ಅಂಚು ಅಂಚಿಗೂ ತೇರನೆಳೆಯುವ ತಾಯು ಕಾಣುವ ಉತ್ಸವ
ಬನ್ನಿರಿ ಗೆಳೆಯರೆ ಗಣರಾಜ್ಯಕೆ-ಜಯವೆನ್ನೋಣ ಗಣರಾಜ್ಯವ ಕಾಯೋಣ ॥
ವರ್ಷವರ್ಷಕೂ ಅದೇ ತೇರಿನ ಗಾಲಿಗಳು ಇದೆ ನೆಲದಲ್ಲಿ
ಹೊಸ ಹುರುಪನೆ ಹೊತ್ತು ಉರುಳುತ್ತಿವೆ ನೋಡು ಸಂಭ್ರಮದಲ್ಲಿ
ಪಾದಗಟ್ಟೆಯ ಮುಟ್ಟಿ ಮತ್ತೆ ಸಾಗುತ್ತಿವೆ ಮತ್ತೆ ತಾವೇ ನಡೆದ ದಾರಿಯಲ್ಲಿ
ಆ ಉದ್ದ ಈ ಉದ್ದ ತಿದ್ದುತಿವೆ ಹಿಂದೆ ನಡೆದು ಮುಗ್ಗರಿಸಿದ ತೆಗ್ಗುತೆವರನಲ್ಲಿ
ಬನ್ನಿರಿ ಗೆಳೆಯರೇ ಗಣರಾಜ್ಯಕೆ-ಜಯವೆನ್ನೋಣ ಗಣರಾಜ್ಯವ ಕಾಯೋಣ
ಇಂದಿಗೆ ನಾಲ್ಕು ದಶಕಗಳ ಮೇಲೆ ಒಂಬೊತ್ತು ವರ್ಷಗಳ ಹಿಂದೆ
ಆಸೇತು ಹಿಮಾಚಲ ಪೂರ್ಣಸ್ವಾತಂತ್ರ್ಯದ ಘೋಷಣೆಯು ಕೇಳಿ ಬಂದ ಸವಿನೆನವು
ಈಗೆರಡು ದಶಕಗಳ ಮೇಲೆ ಒಂಬತ್ತು ವರ್ಷಗಳ ಹಿಂದೆ ಮನಸ್ಸಿದ್ದಲ್ಲಿ ಮಹದೇವ
ಆಯಿತಾ ಕನಸಿಗೆ ನನಸು ಇಂದೆ; ಗಣರಾಜ್ಯೋದಯದಿಂದೆ
ಬನ್ನಿರಿ ಗೆಳೆಯರೇ ಗಣರಾಜ್ಯಕೆ-ಜಯವೆನ್ನೋಣ ಗಣರಾಜ್ಯವ ಕಾಯೋಣ ॥
ನಮ್ಮಯ ಬದುಕಿನ ಗಡಿಗಿಗೆ ನಮ್ಮದೆ ಸುಣ್ಣವ ಬಣ್ಣವ ಹೂಸಿ
ನಮ್ಮ ನೆಲದ ಗರಿ ತೋರಣವನೆ ಕಟ್ಟಿ ಅದರೊಳು ನಮ್ಮ ಜೀವನವನೆ ತುಂಬಿ
ನುಡಿಯಲು ಕಲಿತೆವು ನಡೆಯಲು ಕಲಿತೆವು ಹೊಸ ಜೀವನ ಸಂಧಾನ
ಸಾರುತ್ತಿದೆ ನ್ಯಾಯನೀತಿ–ಸಮಾನತೆ–ಸೌಹಾರ್ದಗಳ ಬುಡಕಟ್ಟಿನ ಸಂವಿಧಾನ
ಬನ್ನಿರಿ ಗೆಳೆಯರೆ ಗಣರಾಜ್ಯಕೆ ಜಯವೆನ್ನೋಣ ಗಣರಾಜ್ಯವ ಕಾಯೋಣ ॥
ಈ ನಡೆಯು ಉಲಿಯಲಿದೋ ಕೇಳುತ್ತಿದೆ ಜನಗಣಮನ ಅಧಿನಾಯಕ
ಮೋಹನ ಜವಾಹರ ವಲ್ಲಭ ಭೀಮರ ಕರ್ತವ್ಯಪಾಲನೆಯು ಮಂತ್ರ ಘೋಷ ಘೋಷ
ಅರವಿಂದಘೋಷರ ವಿವೇಕಾನಂದರ ಬಂಕಿಮಚಂದರ ತತ್ತ್ವದ ಅಮೃತ ಕಲಶ
ಸಂತರ ಸೇಂಟರ ವಲಿಗಳ ಫಕೀರರ ಅಂತಃಸತ್ವದ ಶಾಶ್ವತ ಹರುಷ
ಬನ್ನಿರಿ ಗೆಳೆಯರೆ ಗಣರಾಜ್ಯಕೆ–ಜಯವೆನ್ನೋಣ ಗಣರಾಜ್ಯವ ಕಾಯೋಣ.

—ವಸಂತ ಕುಷ್ಟಗಿ

# ಶಿರಸಿಯ ಸಾಹಿತ್ಯ ಸಮ್ಮೇಲನ

ಸಂಪಾದಕರು

ಕಾರವಾರ ಜಿಲ್ಲೆಯ ಪ್ರಸಿದ್ಧ ವ್ಯಾಪಾರಕೇಂದ್ರವಾದ ಶಿರಸಿಯಲ್ಲಿ ೧೯೮೨ನೇ ಡಿಸೆಂಬರ್ ೨೩, ೨೪, ೨೫ನೆಯ ದಿನಾಂಕಗಳಲ್ಲಿ ೫೫ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಲನ ಕನ್ನಡನಾಡಿನ ಸುಪ್ರಸಿದ್ಧ ಸಾಹಿತಿ ಗೊರೂರು ರಾಮಸ್ವಾಮಯ್ಯಂಗಾರ್ ಅವರ ಘನ ಅಧ್ಯಕ್ಷತೆಯಲ್ಲಿ ನೆರವೇರಿತು.

ಶಿರಸಿ ಕರ್ನಾಟಕದ ಮಲೆನಾಡಿನ ನಯನಮನೋಹರ ಪ್ರಕೃತಿ ಸೌಂದರ್ಯದ ಮಧ್ಯದಲ್ಲಿ ರಾರಾಜಿಸುವ ಪ್ರಸಿದ್ಧ ವ್ಯಾಪಾರಕೇಂದ್ರ. ಪುರಾಣ ಇತಿಹಾಸ ಪ್ರಸಿದ್ಧವಾದ ಅನೇಕ ಹಳೆಯ ನಗರಗಳು ತೀರ್ಥಕ್ಷೇತ್ರಗಳ ನಿಕಟವರ್ತಿಯಾದ ನಗರ. ತಾತ್ಕಾಲಿಕವಾಗಿ ಈ ನಗರಕ್ಕೆ 'ಪಂಪಕವಿ ಮಹಾನಗರ'ವೆಂದು ಹೆಸರಿಟ್ಟುದು ಒಂದು ವೈಶಿಷ್ಟ್ಯಪೂರ್ಣವಾಗಿತ್ತು. ಕಾರಣ : ಇಲ್ಲಿಗೆ ಕೇವಲ ೧೩ ಮೈಲುಗಳ ದೂರದಲ್ಲಿ ಕದಂಬರ ಪ್ರಸಿದ್ಧ ರಾಜಧಾನಿಯೂ, ಅಲ್ಲಮಾದಿ ಪ್ರಸಿದ್ಧ ಶಿವಶರಣರ ಆಡುಂಬೊಲವೂ ಆದ ಬನವಾಸಿ ನಗರವಿದೆ. ಪಂಪ ಮಹಾಕವಿಯ ಕಾವ್ಯಜೀವನಕ್ಕೆ ಸ್ಫೂರ್ತಿಯಿತ್ತ ಸ್ಥಾನ ಇದೇ ಬನವಾಸಿ. '....ಆರಂಕುಶಮಿಟ್ಟೊಡಂ ನೆನೆವುದೆನ್ನಮನಂ ಬನವಾಸಿದೇಶಮಂ' ಎಂದು ತನ್ನ ವಿಕ್ರಮಾರ್ಜುನ ವಿಜಯದಲ್ಲಿ ಬನವಾಸಿ ನಾಡನ್ನು ಹಾಡಿಹರಸಿದ್ದಾನೆ. ಇಂಥ ಬನವಾಸಿ ನಾಡಿನ ಇಂದಿನ ಪ್ರಸಿದ್ಧ ಪಟ್ಟಣವಾದ ಶಿರಸಿಗೆ ಸಮ್ಮೇಲನ ನಡೆಯುವಷ್ಟು ಕಾಲವಾದರೂ **'ಪಂಪಕವಿ ಮಹಾನಗರ'** ಎಂದು ಕರೆದುದು ಅಭಿಮಾನದ ಸಂಗತಿ.

**ಶಿರಸಿಯ ಪರಿಸರ :** ಶಿರಸಿಯಿಂದ ಪೂರ್ವಕ್ಕೆ ಕೆಲವೇ ಮೈಲುಗಳ ಅಂತರದಲ್ಲಿ ಕದಂಬರ ಇನ್ನೊಂದು ಶಾಖೆಯ ವಿರಾಟನಗರಿಯೆಂದು ಕರೆಯಿಸಿಕೊಳ್ಳುವ ಹಾನಗಲ್ಲು ಇದೆ. ಉತ್ತರಕ್ಕೆ ೯–೧೦ ಮೈಲುಗಳ ಅಂತರದಲ್ಲಿ ಇತಿಹಾಸ ಪ್ರಸಿದ್ಧ ಸ್ವಾದಿ ಇದೆ. ಪಶ್ಚಿಮದಲ್ಲಿ ಸುಮಾರು ೪೮ ಮೈಲುಗಳ ಅಂತರದಲ್ಲಿ ಪ್ರಸಿದ್ಧ ಜ್ಯೋತಿರ್ಲಿಂಗಸ್ಥಾನವಾದ ಪ್ರಾಚೀನ ಗೋಕರ್ಣ ಕ್ಷೇತ್ರವಿದೆ. ದಕ್ಷಿಣಕ್ಕೆ ಕೇವಲ ೨೪ ಮೈಲುಗಳ ಅಂತರದಲ್ಲಿ ಪ್ರಸಿದ್ಧ ವ್ಯಾಪಾರೀಕೇಂದ್ರವಾದ ಸಿದ್ಧಾಪುರವಿದೆ. ಅಲ್ಲದೆ ಆಗ್ನೇಯ ದಿಕ್ಕಿನಲ್ಲಿ ಕೆಲವಾರು ಮೈಲುಗಳಲ್ಲಿ ಇತಿಹಾಸ ಪ್ರಸಿದ್ಧವಾದ ಕದಂಬರ ಮೂಲ ರಾಜಧಾನಿ ತಾಳಗುಂದವಿದೆ. ಅದರ ಸಮೀಪದಲ್ಲಿಯೇ ಬಳ್ಳಿಗಾವಿಯಂಥ ಪ್ರಸಿದ್ಧ ಪ್ರಾಚೀನ ನಗರವಿದೆ. ಇತಿಹಾಸ ಪ್ರಸಿದ್ಧ ಕುಪ್ಪತ್ತೂರು ಪೂರ್ವ ದಿಕ್ಕಿನಲ್ಲಿ ಕೆಲವೇ

ಮೈಲುಗಳ ಅಂತರದಲ್ಲಿದೆ. ೧೨ನೇ ಶತಮಾನದಲ್ಲಿ ಶಿವಶರಣರಿಗೆ ಆಶ್ರಯ ಕೊಟ್ಟಿದ್ದ ಘೋರಾರಣ್ಯ ಮಧ್ಯದ 'ಉಳವಿ' ಉತ್ತರಕ್ಕೆ ನೂರಾರು ಮೈಲುಗಳ ಅಂತರದಲ್ಲಿದೆ. ಪಶ್ಚಿಮ ಭಾಗದಲ್ಲಿ ಸಮುದ್ರದಂಡೆಯ ವ್ಯಾಪಾರಕೇಂದ್ರಗಳಾಗಿರುವ ಕುಮಟಾ, ಹೊನ್ನಾವರಗಳಿವೆ. ಇಂಥ ಮಹತ್ವ ಪೂರ್ಣ ಪರಿಸರ ಮಧ್ಯದ ಶಿರಸಿಯಲ್ಲಿ ಅಚ್ಚುಕಟ್ಟಾಗಿ ಸಾಹಿತ್ಯ ಸಮ್ಮೇಲನವನ್ನು ಗಾಂಧಿಯುಗದ ವೃದ್ಧ ವಿಚಾರವಾದಿ ಸಾಹಿತಿಯಾದ ಗೊರೂರು ಅವರ ಅಧ್ಯಕ್ಷತೆಯಲ್ಲಿ ಯಶಸ್ವಿಯಾಗಿ ನಡೆಸಿದ ಕೀರ್ತಿ ನಾಗರಿಕರಿಗೆ ಸಲ್ಲಬೇಕು.

ಸಾಂಪ್ರದಾಯಕವಾಗಿ ಅನೇಕ ಗೋಷ್ಠಿಗಳನ್ನು ನೆರವೇರಿಸುವುದು, ನಿರ್ಣಯಗಳನ್ನು ಮಾಡುವುದು, ವಿವಿಧ ಪ್ರಬಂಧ ಮಂಡನೆ ಇವೆಲ್ಲ ಮಾಮೂಲಿ ಕೆಲಸಕಾರ್ಯಗಳು, ಮೂರು ದಿನದುದ್ದಕ್ಕೂ ಜರಗಿದುವೆಂದು ಹೇಳಬೇಕಾಗಿಲ್ಲ. ಮುಖ್ಯವಾಗಿ ಅಧ್ಯಕ್ಷ ಭಾಷಣ ಮಾತ್ರ ಎಲ್ಲರ ಗಮನ ಸೆಳೆದ ಒಂದು ಪ್ರಮುಖ ಅಂಶವೆಂಬುದನ್ನು ಮರೆಯುವಂತಿಲ್ಲ. ಸಮ್ಮೇಲನದ ವಿವಿಧ ಗೋಷ್ಠಿಗಳಿಗೆ ಆಹ್ವಾನಿಸಲ್ಪಟ್ಟ ಸಾಹಿತಿಗಳಲ್ಲಿ ಅಧಿಕ ಪಾಲು ಕಿರಿಯರಿಗೆ ಮೀಸಲಾಗಿದ್ದು ಅನೇಕ ಗಣ್ಯ ಸಾಹಿತಿಗಳಿಗೆ ಸ್ಥಾನವಿಲ್ಲದ ಕೊರತೆ ಈ ಸಮ್ಮೇಲನದ ವೈಶಿಷ್ಟ್ಯಗಳಲ್ಲೊಂದಾಗಿತ್ತು.

**ಅಧ್ಯಕ್ಷ ಭಾಷಣ :** ಎಂಬತ್ತು ಶರದೃತುಗಳ ಗಡಿಯಲ್ಲಿನ ವೃದ್ಧ ಗೊರೂರವರು ತಮ್ಮ ಜೀವನದುದ್ದಕ್ಕೂ ಅಂಟಿಬಂದ ತಿಳಿಹಾಸ್ಯದ ಹೊನಲಿನೊಡನೆ ಹರಿದು ಬಂದ ಅವರ ದೀರ್ಘ ಅಧ್ಯಕ್ಷ ಭಾಷಣವನ್ನು ಕನ್ನಡನಾಡು–ನುಡಿ–ಜೀವನ–ರಾಜಕೀಯ ವಿಷಯಗಳೆಲ್ಲದರ ಬಗೆಗೆ ಪರಿಸರದ ಎಲ್ಲ ವಿಷಯಗಳ ಕಡೆಗೂ ದೃಷ್ಟಿಬೀರಿ ವಿವಾದಗಳಿಗೆ ಸ್ಥಾನವಿಲ್ಲದಂತೆ ಅನುಭವದಾಳದಿಂದ ಹೊಮ್ಮಿದ ಬಿಚ್ಚು ಮಾತುಗಳ ಚುಚ್ಚು ನುಡಿಗಳಿಂದ ಉದ್ಘೋಷಿಸಿ ಕಿಕ್ಕಿರಿದು ಸೇರಿದ ಜನಮನವನ್ನೆಲ್ಲ ಗೆದ್ದರೆಂದು ಹೇಳಬಹುದು. ಮುಖ್ಯವಾಗಿ ಅವರ ಭಾಷಣದಲ್ಲಿ ದೀನರು, ದಲಿತರು, ದುರ್ಬಲರುಗಳ ಆತ್ಮತೇಜಸ್ಸನ್ನು ಹೆಚ್ಚುಗೊಳಿಸಬಲ್ಲ ಸಾಹಿತ್ಯ ನಿರ್ಮಿತಿಯತ್ತ ಸಾಹಿತಿಗಳು ಶ್ರಮಿಸಬೇಕು. ನಮ್ಮ ಸಹೋದರರೇ ಆಗಿರುವ, ನಮ್ಮ ಮಣ್ಣಿನಿಂದಲೇ ನಮ್ಮ ಜೊತೆಗೇ ಮೂಡಿಬಂದಿರುವ ಹರಿಜನ–ಗಿರಿಜನ–ದುರ್ಬಲವರ್ಗ–ಶೋಷಿತವರ್ಗ–ದಲಿತವರ್ಗ ಇನ್ನಿತರ ಮುಂದುವರಿದ ವರ್ಗದ ನಡುವಿನ ವಿವಿಧ ಅಂತರಗಳು ಮಾಯವಾಗಬೇಕು. ಈ ಅಂತರ ನೀಗಲೆಂದೇ ಗಾಂಧಿಯವರು ಜೀವನದುದ್ದಕ್ಕೂ ಹೆಣಗಿದರು. ಈ ಅಂತರ ಹೋಗಲಾಡಿಸುವ ನಿಟ್ಟಿನಲ್ಲಿ ಸಾಹಿತ್ಯ ಸೃಷ್ಟಿಯಾಗಬೇಕು. ನೂರಕ್ಕೆ ಎಪ್ಪತ್ತರಷ್ಟು ನಿರಕ್ಷರಕುಕ್ಷಿಗಳಾಗಿರುವ ಅವರನ್ನೆಲ್ಲ ಸಾಕ್ಷರರನ್ನಾಗಿ ಮಾಡುವ ಹೊಣೆ ಎಲ್ಲ ವಿದ್ಯಾವಂತರದು. ಸ್ವರಾಜ್ಯ ಸ್ಥಾಪನೆಯಾಗಿ ೩೫ ವರ್ಷ ಕಳೆಯಿತು. ಆದರೂ ಈ ನಿಟ್ಟಿನಲ್ಲಿ ಆದ ಕೆಲಸ ತೀರ ಕಡಿಮೆ. ಕೋಟಿಕೋಟಿ ಸಂಖ್ಯೆಯ ಈ



ನಿರಕ್ಷರರ ದುಡಿಮೆಯ ಫಲ ಇಂದಿನ ವಿದ್ಯಾವಂತರೆನ್ನಿಸಿದವರ ಮೇಲ್ಮೆಗೆ ಕಾರಣ ಒಡೆಯರಾದ ಅವರ ಋಣತೀರಿಸಬೇಡವೇ? ಎಂದು ಎಚ್ಚರಿಸಿದರು. ಮುಖ್ಯವಾಗಿ ಇವರ ಭಾಷಣ ಆಡಂಬರರಹಿತವಾಗಿ ಅನುಭವದ ಆಳದಿಂದ ಹೊರಬಂದು ನೇರವಾಗಿ ಸಭಿಕರನ್ನು ಸೆರೆಹಿಡಿಯುತ್ತಿತ್ತು.

ಇಂಗ್ಲೀಷ್ ವ್ಯಾಮೋಹ ಇಂದಿನ ಪೀಳಿಗೆಯಿಂದ ಮಾಯವಾಗಬೇಕೆಂಬ ಕಳಕಳಿಯ ಮನವಿಮಾಡಿ, ಮಾತೃಭಾಷಾ ಸ್ಥಾನಮಾನದ ವಿಶ್ಲೇಷಣೆಯನ್ನು ವಿವೇಕಪೂರ್ಣವಾಗಿ ಮಾಡಿ ಚೂಟಿಯಂಥ ತಮ್ಮ ಮಾತಿನೇಟಿನಿಂದ ಜನತೆಯನ್ನೆಚ್ಚರಿಸಿದರು. ಇಂದಿನ ವಿಶ್ವದ ವಿಪನ್ನಾವಸ್ಥೆಯಲ್ಲಿ ಅಹಿಂಸಾಮಾರ್ಗದ ಮಹತ್ತು ಬೃಹತ್ತುಗಳ ವಿಶ್ಲೇಷಣೆ ಮಾಡುತ್ತ ಗಾಂಧೀವಾದದ ಮೇಲ್ಮೆಯನ್ನು ಎತ್ತಿಹಿಡಿದರು. ಲೋಕವನ್ನು ಬದುಕಿಸಬಲ್ಲ ಸಾಹಿತ್ಯಸೃಷ್ಟಿಯ ಬಗೆಗೆ ಒತ್ತಿ ಹೇಳಿದ ಅಧ್ಯಕ್ಷರು, ಮಕ್ಕಳ ಸಾಹಿತ್ಯದ ಇತಿಮಿತಿ, ಶಾಲೆಗಳ ದುಃಸ್ಥಿತಿ, ಶಿಕ್ಷಣದ ಅವನತಿ, ಪತ್ರಕರ್ತರ ಕರ್ತವ್ಯ, ಅಭಿವ್ಯಕ್ತಿ ಸ್ವಾತಂತ್ರ್ಯ, ಬಿಹಾರದ ಪತ್ರಿಕಾ ವಿಧೇಯಕದ ಖಂಡನೆ, ಕನ್ನಡಿಗರಿಗೆ ಕನ್ನಡಕ್ಕೆ ಅಪಮಾನ ತರುವ ದೂರದರ್ಶನ ರೀತಿನೀತಿ ಖಂಡನೆ, ವಿಶ್ವ ಕನ್ನಡ ಸಾಹಿತ್ಯ ಸಮ್ಮೇಲನದ ವಿಶ್ಲೇಷಣೆ, ಸಾಹಿತ್ಯಪರಿಷತ್ತಿನ ಕುಂದುಕೊರತೆ—ಹೀಗೆ ಹಲವು ಹನ್ನೊಂದು ಮುಖಗಳಲ್ಲಿ ಅನುಭವಪೂರ್ಣವಾಗಿ ಮೂಡಿಬಂದ ಭಾಷಣ ಶ್ರೀಸಾಮಾನ್ಯನ ಬಳಿಗೆ ಸಾಹಿತ್ಯ ರಥವನ್ನು ಕೊಂಡೊಯ್ಯುವ ಅಗತ್ಯದ ನಿರ್ದೇಶನವಾಗಿತ್ತೆಂದರೆ ತಪ್ಪಲ್ಲ. ●

---

(10ನೇ ಪುಟದಿಂದ)

ಟ್ಟಿರುವ ಪ್ರೀತಿ ವಿಶ್ವಾಸ, ಅಭಿಮಾನ ಶ್ರದ್ಧಾ ಸಂಪತ್ತಿನ ಭಾಗ್ಯಬೇರೊಂದು ಸಂಸ್ಥೆಗಿಲ್ಲವೆಂಬುದು ಆತ್ಮ ಸಂತೋಷ ಬಂದ ಆ ಮಾತನ್ನು ಎಲ್ಲರೂ ಗಮನದಲ್ಲಿಡಬೇಕು. ನೀವುಗಳೆಲ್ಲರೂ ನಾಡಿನ ವಿವಿಧ ಕ್ಷೇತ್ರಗಳಲ್ಲಿ ಉದ್ಯೋಗದಲ್ಲಿದ್ದೀರಿ. ನಿಮ್ಮ ನಿಮ್ಮ ಕ್ಷೇತ್ರದಲ್ಲಿ ಪ್ರಾಮಾಣಿಕವಾಗಿ ಸತ್ಯ ಶುದ್ಧವಾಗಿ, ಸೇವಾ ಮನೋಭಾವದಿಂದ ಕಾರ್ಯ ನಿರ್ವಹಿಸಿದರೆ ಅದು ಕ್ಷೇತ್ರಕ್ಕೆ ನಿಮ್ಮಿಂದ ಮಹತ್ಕೀರ್ತಿಯನ್ನು ತಂದಂತಾಗುತ್ತದೆ ನೀವೆಲ್ಲರು ದೇಶದ ಆಸ್ತಿಯಾಗಬೇಕು. ಇಂದು ಕಾಣುವ ದೇಶದಲ್ಲಿ ನೈತಿಕ ಅಧಃಪತನ, ಆರ್ಥಿಕ ಅವ್ಯವಸ್ಥೆ, ಸಮಾಜದ ಸುಸ್ಥಿತ, ಮತ್ತು ಭಾರತೀಯರ ಉಜ್ವಲ ಧಾರ್ಮಿಕ ಪರಂಪರೆಯನ್ನು ಕಾಪಾಡಿಕೊಂಡು ಬರುವುದರಲ್ಲಿ ಶ್ರಮವಹಿಸಬೇಕು. ಆತ್ಮಕಲ್ಯಾಣದ ಜೊತೆಗೆ ದೇಶಕಲ್ಯಾಣವು ನಿಮ್ಮಗುರಿಯಾಗಿರಲಿ ಕರ್ತವ್ಯ ಪ್ರಜ್ಞೆಯಲ್ಲಿ ಜಾಗೃತವಾಗಿರಲಿ ಆ ವಿಧವಾದ ಸದ್ಬುದ್ಧಿಯನ್ನು ಕ್ಷೇತ್ರಾಧಿಪತಿಯಾದ ಶ್ರೀ ಸಿದ್ಧಲಿಂಗೇಶ್ವರರು ಅನುಗ್ರಹಿಸಲೆಂದು ಆಶೀರ್ವದಿಸಿದರು. ಸಭೆಗೆ ಅನೇಕ ಮಠಗಳ ಮಠಾಧಿಪತಿಗಳೂ ಆಗಮಿಸಿದ್ದರು. ಈ ಸಭೆಯ ವಿಶೇಷವೆಂದರೆ ಶ್ರೀಕ್ಷೇತ್ರದ ಸಾಕ್ಷ್ಯ ಚಿತ್ರದ ಅಂಗವಾಗಿ ಮಹಾಧಿವೇಶನದ ಚಿತ್ರೀಕರಣವು ಶ್ರೀ. ಗೊ. ರು. ಚನ್ನಬಸಪ್ಪನವರ ನಿರ್ದೇಶನದಲ್ಲಿ ನಡೆಯಿತು. ಸಭೆಯು ಮಂಗಳದೊಡನೆ ಮುಕ್ತಾಯವಾಯಿತು. ●

7 ನೇ ಪುಟದಿಂದ

ದಿಂದ ಮುಂದುವರಿದು ಕಾರ್ಯಮಾಡಿದರೆ ಜನತೆಯೂ ತನ್ನ ಬೆಂಬಲವನ್ನು ಕೊಟ್ಟೇ ಕೊಡುತ್ತದೆ. ಸರಕಾರ ಅವೈಜ್ಞಾನಿಕವಾದ ಜಾತಿ ಮತಗಳ ಆಧಾರದ ಮೇಲೆ ಮುಖ ನೋಡಿ ಮಣೆ ಹಾಕದೆ ಸಮಗ್ರ ಜನತೆಯ ಆಶೋತ್ತರಗಳನ್ನು ಈಡೇರಿಸುವ ರಾಜಮಾರ್ಗದಲ್ಲಿ ನಡೆಯಬೇಕು. ಬಡತನವೆಂಬುದು ಎಲ್ಲ ಮತಕೋಟಿಗಳಲ್ಲೂ ಇದೆ. ಅದನ್ನು ಗುರುತಿಸಿ ಯೋಜನಾಬದ್ಧವಾಗಿ ಅದರ ನಿವಾರಣೆಗೆ ಯತ್ನಿಸಬೇಕಲ್ಲದೆ ಜಾತಿ ಆಧಾರದ ಮೇಲಲ್ಲ. ಜಾತಿ ಆಧಾರದ ಮೇಲೆ ಕಾರ್ಯಪ್ರವೃತ್ತರಾದರೆ ಘರ್ಷಣೆ ಮತ್ತೂ ತಪ್ಪಿದ್ದೇ ಅಲ್ಲ. ಇದನ್ನೆಲ್ಲ ಲಕ್ಷ್ಯದಲ್ಲಿಟ್ಟು ನೂತನ ಜನತಾ ಸರಕಾರ ತನಗೆ ಸಿಕ್ಕ ಈ ಸುವರ್ಣಾವಕಾಶವನ್ನು ಅರ್ಥಪೂರ್ಣವಾಗಿ ಬಳಸಿಕೊಂಡರೆ ಅದು ರಾಷ್ಟ್ರಕ್ಕೇ ಮಾದರಿಯಾದೀತು. ಬೆಲೆ ಏರಿಕೆ ತಡೆಗಟ್ಟುವ ಭರದಲ್ಲಿ ರೈತರಿಗೆ ಅನ್ಯಾಯವಾಗದಂತೆ ವರ್ತಿಸುವುದೂ ಮುಖ್ಯವಾಗಿದೆ. ರಾಜ್ಯದ ಬಹು ದೊಡ್ಡ ವೃತ್ತಿಯಲ್ಲಿ ನಿರತರಾಗಿರುವ ರೈತ ವರ್ಗಕ್ಕೆ ಆಗಿರುವ ಅನ್ಯಾಯ ಎಲ್ಲ ಅನ್ಯಾಯಕ್ಕೂ ಹೆಚ್ಚಿನದು. ಅವರು ನಿಜವಾಗಿಯೂ ನೆಲಕಚ್ಚಿ ಹೋಗಿದ್ದಾರೆ. ಆ ಸಮಸ್ಯೆ ಬಿಡುಸುವಲ್ಲಿ ಸರಕಾರದ ಅಗ್ನಿ ಪರೀಕ್ಷೆ ಅಡಗಿದೆ. ರಾಜ್ಯದ ಈ ಎಲ್ಲ ಸಮಸ್ಯೆಗಳ ಪರಿಹಾರ ಕಾರ್ಯದಲ್ಲಿ ನೂತನ ಸರಕಾರಕ್ಕೆ ಶಕ್ತಿಯನ್ನು ಈಶ್ವರನು ಕೊಡಲೆಂದು ಹಾರೈಸಿ, ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗ್ಗಡೆ ಮತ್ತು ಅವರ ಇನ್ನಿತರ ಮಂತ್ರಿ ಮಹೋದಯರಿಗೂ ಹಾರ್ದಿಕ ಸ್ವಾಗತವನ್ನು ಬಯಸುತ್ತೇವೆ.

ಶ್ರೀ ಕ್ಷೇತ್ರದಲ್ಲಿ ೮-೧-೮೩ ರಂದು ಹಳೆಯ ವಿದ್ಯಾರ್ಥಿಗಳ ಸಂಘದ ಸರ್ವ ಸರ್ವ ಸದಸ್ಯರ ಸಭೆ ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರ ದಿವ್ಯ ಸನ್ನಿಧಿಯಲ್ಲಿ ನಡೆದು ಮಹತ್ತರ ನಿರ್ಣಯಗಳನ್ನು ಕೈಕೊಂಡಿದೆ. ದಯವಿಟ್ಟು ಸಂಘದ ಸದಸ್ಯರೆಲ್ಲರ ಮಾತೃ ಸಂಸ್ಥೆಗೆ ತಮ್ಮ ಶಕ್ತ್ಯಾನುಸಾರ ಸೇವೆ ಸಲ್ಲಿಸಿ ಕೃತಾರ್ಥತೆ ಪಡೆಯಬೇಕೆಂದು ಹಾರೈಸುತ್ತೇವೆ.

## ಪುಸ್ತಕ ಭಂಡಾರ

**" ದೇಶ ನೋಡಿ, ಇಲ್ಲವೇ ಕೋಶ ಓದಿ" ಎಂಬುದೊಂದು ಗಾದೆ. ಪ್ರವಾಸದಿಂದ ಲೋಕಾನುಭವ ಉಂಟಾದರೂ ಎಲ್ಲರಿಗೂ ನಿಲುಕದ ವಿಷಯ. ಆದರೆ ಇದ್ದಲ್ಲಿಯೇ ಜಗತ್ತಿನ ಆಗು-ಹೋಗುಗಳು ಹಾಗೂ ವಿವಿಧ ವಿಷಯ ಜ್ಞಾನ ಪುಸ್ತಕ ಓದುವುದರಿಂದ ಸಿಕ್ಕುತ್ತದೆ. ಆದ್ದರಿಂದ ವಿವಿಧ ರೀತಿಯ ಪುಸ್ತಕಗಳನ್ನೋದುವುದು ಒಂದು ಹವ್ಯಾಸವಾಗಿ ಬೆಳೆದು ಬರಬೇಕು.**



# ಮಕರ ಸಂಕ್ರಮಣ

**ಹಬ್ಬಗಳ ವೈಶಿಷ್ಟ್ಯ**

**–ಪಂಡಿತ ಚನ್ನಪ್ಪ ಎರೇಸೀಮೆ**

ಭಾರತೀಯ ಸಂಸ್ಕೃತಿಯಲ್ಲಿ ಬಹು ಪ್ರಾಚೀನ ಕಾಲದಿಂದ ಆಚರಿಸುತ್ತ ಬಂದಿರುವ ಹಬ್ಬಗಳೆಲ್ಲವುಗಳ ಹಿಂದೆ ಒಂದು ವಿಶೇಷ ಅರ್ಥವಿದೆ. ಕಾಲಮಾನ, ಋತುಮಾನ, ಉದ್ಯೋಗ, ವ್ಯವಸಾಯ, ದೇವತೆಗಳು, ಪಿತೃಗಳು, ಇತಿಹಾಸ ಪುರಾಣೋಕ್ತ ಪ್ರಸಿದ್ಧ ಮಹಾಪುರುಷರೇ ಮುಂತಾದವರ ಹೆಸರಿನಲ್ಲಿ ಆಚರಿಸುವ ಈ ಹಬ್ಬಗಳ ಬಗೆಗೆ ಅವುಗಳನ್ನು ಹೇಗೆ ಆಚರಿಸಬೇಕೆಂಬ ಬಗೆಗೆ ವಿಪುಲ ಸಾಹಿತ್ಯ ರಾಶಿಯೂ ಇದೆ. ಕಾಲಕಾಲಕ್ಕೆ ಬೆಳೆದು ಬಂದ ಈ ಸಾಹಿತ್ಯ ರಾಶಿಯಲ್ಲಿ ಅದೆಷ್ಟೋ ಅವೈಜ್ಞಾನಿಕ ಮೂಢಕಲ್ಪನೆಗಳು ತಲೆದೋರಿರಬಹುದು. ಆದರೆ ಸಮಸ್ತ ಹಿಂದೂ ಜನಾಂಗದ ಸಾಮಾಜಿಕ ಶಾಂತಿ, ಧಾರ್ಮಿಕ ಶುದ್ಧಿ, ಸಾಂಸ್ಕೃತಿಕ ಅಭಿವೃದ್ಧಿ, ಭಾವೈಕ್ಯ ಕಲ್ಪನೆ ಮೊದಲಾದ ಹಿನ್ನೆಲೆಗಳ ಕಾರಣದಿಂದ ತತ್ತ್ವಬದ್ಧವಾಗಿ ಒಪ್ಪಬಹುದಾದ ಅಭಿಪ್ರಾಯಗಳನ್ನು ಆಚರಿಸುವಲ್ಲಿ ಹಿಂದೂ ಸಂಸ್ಕೃತಿಯ ಪರಮೋಚ್ಚ ವಿಚಾರಧಾರೆಯ ಅಂಶಗಳು ಗೋಚರವಾಗುತ್ತವೆ.

ಮಕರ ಸಂಕ್ರಮಣ ಕೇವಲ ಸಂಪ್ರದಾಯ ಶರಣ್ಯದ ಒಂದು ಹಬ್ಬವಲ್ಲ; ಪ್ರಾಚೀನ ಹಿಂದೂ ಸಂಸ್ಕೃತಿಯಲ್ಲಿ ಮರ್ತ್ಯಾಮರ್ತ್ಯಗಳಿಗೆ ಸಂಬಂಧ ಕಲ್ಪಿಸಿರುವ ಭಾವೈಕ್ಯವನ್ನು ಸಾಧಿಸುವ ಭೂಗೋಳ ಖಗೋಳ ಸಿಧ್ಧಾಂತದ ಸಮನ್ವಯ ಸಾಧನೆ, ಪರಸ್ಪರ ಪ್ರೀತಿ ವಿಶ್ವಾಸಗಳನ್ನು ನವೀನಗೊಳಿಸುವ, ಆಮೋದ ಪ್ರಮೋದಗಳಿಗೆ ಎಡೆಗುಡುವ, ಆಹಾರ ವಿಹಾರಗಳಲ್ಲಿ ಬದಲಾವಣೆಯನ್ನುಂಟು ಮಾಡುವ ಮುಖ್ಯವಾಗಿ ಪ್ರಕೃತಿಯಲ್ಲಾಗುವ ಪರಿವರ್ತನೆಯೊಡನೆ ಹೊಂದಿಕೊಳ್ಳುವ ಒಂದು ವಿಶಿಷ್ಟ ಸಂಪ್ರದಾಯವನ್ನಾಚರಿಸಿ ಮೈಮರೆಯುವ ಒಂದು ದೊಡ್ಡ ಹಬ್ಬ. ಈ ಹಬ್ಬವನ್ನು 'ಉತ್ತರಾಯಣಪುಣ್ಯಕಾಲ' ವೆಂದೂ ಕರೆಯಲಾಗುತ್ತದೆ. ಸನಾತನ ಭಾರತೀಯ ಸಂಸ್ಕೃತಿಯೊಡನೆ ಜನಮನವನ್ನು ಒಂದುಗೂಡಿಸುವ ಒಂದು ಪ್ರಮುಖ ಹಬ್ಬ ಅದಾಗಿದೆಯೆಂದು ಹೇಳಬಹುದು.

**ಸಂಕ್ರಮಣ**

ಸಂಕ್ರಮಣ, ಸಂಕ್ರಾಂತಿ – ಈ ಮಾತುಗಳಿಗೆ ಬೇರೆ ಬೇರೆ ಅರ್ಥಗಳುಂಟು ಜ್ಯೋತಿಶ್ಯಾಸ್ತ್ರದಲ್ಲಿ ಗುರುತಿಸಿರುವ ಹನ್ನೆರಡು ರಾಶಿಗಳಲ್ಲಿ ಒಂದಾದ 'ಮಕರ ರಾಶಿ'ಯನ್ನು ಸೂರ್ಯನು ಪ್ರವೇಶಿಸುವುದೇ ಮಕರ ಸಂಕ್ರಾಂತಿಯೆನಿಸಿದೆ. ಈ ರಾಶಿಯ ಪ್ರವೇಶದ ನಂತರ ಸೂರ್ಯಚಲನೆ ಉತ್ತರಕ್ಕೆ ಸರಿಯುತ್ತ ಹೋಗುವುದು. ನಿಜವಾದ ಅರ್ಥದಲ್ಲಿ

ಸೂರ್ಯನೇ ಚಲಿಸುತ್ತಾನೆಂದೇನೂ ಅಲ್ಲ. ಸೂರ್ಯ ಚಲಿಸುವ ವಸ್ತುವೇ ಅಲ್ಲ. ಸೂರ್ಯನ ಸುತ್ತಲೂ ಭೂಮಿಯು ತನ್ನ ಅಕ್ಷಕ್ಕೆ ಇಪ್ಪತ್ತುಮೂರುವರೆ ಅಂಶದ ಕೋನದಲ್ಲಿ ವಾಲಿಕೊಂಡು ತನ್ನ ಸುತ್ತನ್ನು ಸುತುತ್ತಲೇ ೩೬೫ ದಿನಗಳಲ್ಲಿ ಸೂರ್ಯನನ್ನು ಸುತ್ತುವ ಆಶ್ಚರ್ಯಕರ ಈ ಖಗೋಳ ಚಮತ್ಕಾರದ ಸಿದ್ಧಾಂತದ ಕಾರಣವೇ ಸೂರ್ಯನು ಒಂದು ರಾಶಿಯಿಂದ ಇನ್ನೊಂದು ರಾಶಿಗೆ ಸಂಚರಿಸುತ್ತಾನೆಂದು ಭಾವಿಸಿರುವ ಭಾವನೆ ಕಾರಣ ಭೂಮಿಯ ಮೇಲಿನ ಜೀವರಾಶಿಗೆ ಸೂರ್ಯ ಸಂಚರಿಸುವಂತೆ ಭಾಸವಾಗುತ್ತದೆ ಸೂರ್ಯನ ಈ ಸಂಚಾರದ ಉತ್ತರದ ಪರಮಾವಧಿ ಗಡಿ ಕರ್ಕಾಟಕ ರಾಶಿಯಾದರೆ ದಕ್ಷಿಣದ ಮರಮಾವಧಿಯೆ ಮಕರರಾಶಿ ಭೂಮಧ್ಯ ರೇಖೆಯಿಂದ 23½ ಡಿಗ್ರಿಯಲ್ಲಿ ಉತ್ತರಕ್ಕೆ ,ಕರ್ಕಾಟಕ ವೃತ್ತವು, ದಕ್ಷಿಣಕ್ಕೆ 23½ ಡಿಗ್ರಿಯಲ್ಲಿ ಮಕರ ವೃತ್ತವೂ ಇವೆ- ಇದೇ ಸೂರ್ಯ ಸಂಚಾರದ ಪರಮಾವಧಿ ಗಡಿಗಳು. ಈ ಮಕರ ರಾಶಿಯ ಪ್ರವೇಶದ ನಂತರವೇ ಸೂರ್ಯನ ಉತ್ತರದ ಕಡೆಯ ಚಲನ ಪ್ರಾರಂಭವಾಗುವುದು. ಆದುದರಿಂದಲೇ ಇದು ಉತ್ತರಾಯಣವೆನಿಸಿದೆ. ಈ 'ಉತ್ತರಾಯಣ'ದ ಸಂಧಿ ಕಾಲವನ್ನು ಪುಣ್ಯ ಕಾಲವೆಂದು ಪ್ರಾಚೀನ ಭಾರತೀಯರು ಗುರುತಿಸಿ ಆ ಸಮಯದಲ್ಲಿ ಪವಿತ್ರ ಭಾವನೆಯಿಂದ ಅನೇಕ ಧಾರ್ಮಿಕ ವಿಧಿ ವಿಧಾನಗಳನ್ನು ಆಚರಿಸುವುದರ ಮೂಲಕ ಕೃತಾರ್ಥತೆಯ ಭಾವನೆ ಪಡೆಯುತ್ತಾರೆ. ಈ ಪುಣ್ಯಕಾಲವು ಸೂರ್ಯನು ಮಕರರಾಶಿಯಲ್ಲಿ ಪ್ರವೇಶಿಸಿದ ಸಮಯದಿಂದ ಸುಮಾರು ಎಂಟು ತಾಸುಗಳವರೆಗೆ ಇರುತ್ತದೆಂದು ಭಾವಿಸಲಾಗಿದೆ. ಈ ಸಮಯದಲ್ಲಿ ಅನೇಕ ಧಾರ್ಮಿಕ ವಿಧಿ ವಿಧಾನಗಳನ್ನು ಜನ ಆಚರಿಸುತ್ತ ಬಂದಿದ್ದಾರೆ. ದಾನ ಧರ್ಮ ಮಾಡಿದ್ದಾರೆ. ಮಾಡುತ್ತಲೂ ಇದ್ದಾರೆ.

ಗೀತೆಯಲ್ಲಿ ಉತ್ತರಾಯಣ ಪಾವಿತ್ರ್ಯದ ಬಗೆಗೆ :

ಅಗ್ನಿಜ್ಯೋತಿರಹಃ ಶುಕ್ಲಃಷಣ್ಮಾಸಾ ಉತ್ತರಾಯಣಂ ।
ತತ್ರಪ್ರಯಾತಾ ಗಚ್ಛಂತಿ ಬ್ರಹ್ಮಬ್ರಹ್ಮವಿದೋಜನಾಃ ॥ (ಗೀ. 8.24)

ಎಂದು ಹೇಳಲಾಗಿದೆ. ಆದಿತ್ಯದೇವನು ಮಕರರಾಶಿಯಿಂದ ಉತ್ತರಕ್ಕೆ ಸಂಚರಿಸುವ ಶುಕ್ಲವರ್ಣದ ಆರು ತಿಂಗಳುಗಳಲ್ಲಿ ಮೃತರಾದ ಬ್ರಹ್ಮಜ್ಞರಾದವರು ಅಗ್ನಿ, ಜ್ಯೋತಿ, ಅಹಸ್, ಶುಕ್ಲ ಮೊದಲಾದ ಅಭಿಮಾನಿ ದೇವತೆಗಳ ದ್ವಾರಬ್ರಹ್ಮನಲ್ಲಿ ಐಕ್ಯಗೊಳ್ಳುತ್ತಾರೆಂಬ ನಂಬಿಕೆ ಬಹಳ ಪ್ರಾಚೀನಕಾಲದ್ದು. ಮಹಾಭಾರತ ಕಾಲಕ್ಕೂ ಹಿಂದೆ ಹಿಂದೆ ಸರಿಯುವಂಥದ್ದು. ಅಂತೆಯೇ ಭೀಷ್ಮರು ಕುರುಕ್ಷೇತ್ರ ರಣರಂಗದಲ್ಲಿ ಬಾಣಗಳ ಹಾಸಿಗೆಯ ಮೇಲೆ ಮಲಗಿಯೇ ತನ್ನ ಜೀವವನ್ನು ಹಿಡಿದಿಟ್ಟುಕೊಂಡು ಉತ್ತರಾಯಣ ಪುಣ್ಯಕಾಲಕ್ಕಾಗಿ ಕಾಯ್ದರೆಂದು ಮಹಾಭಾರತದಲ್ಲಿ ಉಕ್ತವಾಗಿದೆ.

ಪಶ್ಯಧ್ವಮುಪ ಧಾನಂವೇ ಪಾಂಡವೇನಾಭಿಸಂಧಿತಂ ।
ಶಯೇಯಮಸ್ಯಾಂ ಶಯ್ಯಾಯಾಂ ಯಾವದಾ ವರ್ತನಂ ರವೇಃ ॥



ಯೇತದಾಧಾರಯಿಷ್ಯಂತಿ ತೇಜಪ್ರೇಕ್ಷಂತಿಮಾ ನೃಪಾಃ ।
ದಿಶಂವೈಶ್ರವಣಾ ಕ್ರಾಂತಾಂ ಯದಾಗಂತಾ ದಿವಾಕರಃ ॥
ನೂನಂ ಸಪ್ತಾಶ್ವಯುಕ್ತೇನ ರಥೇನೋತ್ತಮ ತೇಜಸಾ ।
ರಕ್ಷೇಹಂ ವೈಮಮ ಪ್ರಾಣಾನ್ ಸುಹೃದಃ ಸುಪ್ರಿಯಾನಿವ ॥

(ಭೀಷ್ಮಪ. ೪-೧೨೦; ೫೧-೫೨-೫೩)

ಸೂರ್ಯರು ದಕ್ಷಿಣಾಯಣದಿಂದ ಉತ್ತರಕ್ಕೆ ಆವರ್ತನಗೊಳ್ಳುವವರೆಗೆ ಈ ಬಾಣಗಳ ಹಾಸಿಗೆಯ ಮೇಲೆಯೇ ಮಲಗಿರುತ್ತೇನೆ. ಉತ್ತರ ದಿಕ್ಕಿಗೆ ಯಾವಾಗ ಸೂರ್ಯನು ಅಭಿಮುಖನಾಗುವನೋ ಅಲ್ಲಿಯವರೆಗೆ ಎಲ್ಲ ನೃಪರೂ ನನ್ನನ್ನು ನೋಡಲಿ. ಸಪ್ತಾಶ್ವಯುಕ್ತ ರಥದಲ್ಲಿ ನೂತನ ತೇಜಸ್ಸಿನಿಂದ ಸೂರ್ಯದೇವನು ಉತ್ತರಾಭಿಮುಖವಾಗುವವರೆಗೆ ನನ್ನ ಪ್ರಾಣಗಳನ್ನು ಪ್ರೀತಿಪಾತ್ರರಾದ ಸ್ನೇಹಿತರನ್ನು ರಕ್ಷಿಸುವಂತೆಕ್ಷಿರಸುತ್ತೇನೆ ಎನ್ನುತ್ತಾನೆ ಭೀಷ್ಮ.

## ವೇದದಲ್ಲಿ ಸೂರ್ಯಸ್ತೋತ್ರ :

ಈ ಎಲ್ಲ ಕಾರಣಗಳಿಂದ ಮಕರ ಸಂಕ್ರಮಣದ ಅಧಿದೇವತೆಯೇ ಆಗುತ್ತಾನೆ. ಸೂರ್ಯಾರಾಧನೆ ಈ ಹಬ್ಬದ ಪ್ರಮುಖ ವೈಶಿಷ್ಟ್ಯ. ಸೂರ್ಯಾರಾಧನೆ ಭಾರತೀಯರಲ್ಲಿ ಬಹು ಪ್ರಾಚೀನ ಕಾಲದಿಂದಲೂ ಬಂದ ಒಂದು ಮುಖ್ಯ ಸಂಪ್ರದಾಯ. ಸೂರ್ಯನನ್ನು ಪರಬ್ರಹ್ಮತ್ವೇನ ಉಪಾಸನೆ ಮಾಡುವ 'ಸೌರಮತ' ಪ್ರಾಚೀನ ಭಾರತೀಯರ ಷಣ್ಮತಗಳಲ್ಲಿ ಒಂದೆನಿಸಿದೆ. ವೇದವು ಪೃಥ್ವಿಯಲ್ಲಿ ಅಗ್ನಿ, ಅಂತರಿಕ್ಷದಲ್ಲಿ ವಿದ್ಯುತ್ ದ್ಯಾಃ ಸ್ಥಾನದಲ್ಲಿ ಸೂರ್ಯ ಹೀಗೆ ಮೂರು ಸ್ಥಾನಗಳಿಗೆ ದೇವತೆಗಳ ಹಂಚಿಕೆ ಮಾಡಿದೆ. "ಓಂ ತತ್ಸವಿತುರ್ವರೇಣಿಯಂ...." ಎಂದು ಪ್ರಾರಂಭವಾಗುವ ಪ್ರಸಿದ್ಧ ಗಾಯತ್ರಿ ಮಂತ್ರವು ಸವಿತೃಸಂಬಂಧವಾದದ್ದು. ಸವಿತೃವೆಂದರೆ ಸೂರ್ಯ. ಅಷ್ಟಾದಶ ಪುರಾಣಗಳಲ್ಲಿ ಅನೇಕ ಕಡೆ ಸೂರ್ಯನ ಆರಾಧನೆಯ ವರ್ಣನೆ ಬರುತ್ತದೆ. ಋಗ್ವೇದದ ಅನೇಕ ಋಕ್ಕುಗಳು ಸೂರ್ಯಪರವಾಗಿದೆ.

ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ ।
ಅಪ್ರಾದ್ಯಾವಾ ಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ॥
(ಋ ೧-೧೧೫-೧)

ಸೂರ್ಯೋ ದೇವೀಮುಷಸಂ ರೋಚಮಾನಾಂ ಮರ್ಯೋನ ಯೋಷಾ ಮಭ್ಯೇತಿ ಪಶ್ಚಾತ್ ।
ಯತ್ರಾ ನರೋ ದೇವಯಂತೋ ಯುಗಾನಿ ವಿತನ್ವತೇ ಪ್ರತಿ ಭದ್ರಾಯ ಭದ್ರಮ್ ॥ (ಋ. ೧-೧೧೫-೨)

ಭದ್ರಾ ಅಶ್ವಾ ಹರಿತಃ ಸೂರ್ಯಸ್ಯ ಚಿತ್ರಾ ಏತಗ್ವಾ ಅನುಮಾದ್ಯಾಸಃ ।
ನಮಸ್ಯಂತೋ ದಿವ ಆ ಪೃಷ್ಠಮಸ್ತುಃ ಪರಿದ್ಯಾವಾ ಪೃಥಿವೀಯನ್ತಿ ಸದ್ಯಃ ॥
(ಋ. ೧-೧೧೫-೩)

ಇತ್ಯಾದಿ ಅನೇಕ ಮಂತ್ರಗಳನ್ನು ಉದಾಹರಿಸಬಹುದು. "ಆಶ್ಚರ್ಯಕರ ಸ್ವರೂಪದ, ಮಿತ್ರ, ವರುಣ, ಅಗ್ನಿಗಳಿಗೆ ಕಣ್ಣಿನಂತಿರುವ, ಜಗತ್ಪ್ರಕಾಶಕ ಸೂರ್ಯಮಂಡಲ ಹುಟ್ಟಿ ದ್ಯಾವಾ ಪೃಥಿವೀ ಅಂತರಿಕ್ಷಗಳನ್ನು ತುಂಬಿದೆ. ಈ ಜ್ಯೋತಿಮಂಡಲ ಮಧ್ಯದ ಸೂರ್ಯನು ಚರಾಚರ ಜಗತ್ತಿಗೆಲ್ಲ ಆತ್ಮಸ್ವರೂಪನಾಗಿದ್ದಾನೆ. ಉಷಸ್ಸಿನ ಉದಯವಾದೊಡನೆ ಯಾಗ ಕರ್ತೃಗಳು ಸೂರ್ಯಾದಿಗಳನ್ನು ಯಾಗಗಳಿಂದ ಪೂಜಿಸಲಿಚ್ಛೆಯುಳ್ಳವರಾಗಿ ಅಯಾಯ ಕಾಲದ ಕರ್ಮಗಳನ್ನು ಆಚರಿಸುತ್ತಾರೆ. ಸುಂದರ ಸ್ತ್ರೀಯನ್ನು ಹಿಂಬಾಲಿಸುವ ಪುರುಷನಂತೆ ಸೂರ್ಯ ಕಾಂತಿಯುತಉಷಸ್ಸನ್ನು ಹಿಂಬಾಲಿಸುವನು. ಇಂಥ ಮಂಗಳಕರ ಸೂರ್ಯನನ್ನು ನಮ್ಮ ಕಲ್ಯಾಣಕ್ಕೆ ಭಜಿಸೋಣ. ಸೂರ್ಯಾಶ್ವಗಳು ಮಂಗಳಕರವಾದವುಗಳು. ಅಲೌಕಿಕ ಅವಯವ, ವೇಗವಾಗಿ ಸಂಚರಿಸುವ ಶಕ್ತಿಯುಳ್ಳ ಅವು ನಮ್ಮ ಪ್ರಶಂಸೆಗೆ ಮುಖ್ಯ ವಿಷಯಗಳಾಗಿವೆ. ಇಂಥ ಅಶ್ವಗಳು ನಮ್ಮಿಂದ ಪೂಜೆಗೊಂಡು ಆಕಾಶದ ಮೇಲ್ಭಾಗದಲ್ಲಿ ಸಂಚರಿಸುತ್ತಾ ಇವೆ. ಸ್ವಲ್ಪಕಾಲದಲ್ಲೆ ಇವು ಭೂಮಿ ಮತ್ತು ಅಂತರಿಕ್ಷಗಳನ್ನು ಸಂಚರಿಸಬಲ್ಲವು". ಇಷ್ಟು ಇಲ್ಲಿನ ಮಂತ್ರಗಳ ಅರ್ಥ.

**ಸೂರ್ಯನಿಗೆ ವಿಭೂತಿತ್ವ :**

ಹೀಗೆ ಸೂರ್ಯ ಅತ್ಯಂತ ಪುರಾತನವಾದ ಭಾರತೀಯ ಅನೇಕ ದೇವತೆಗಳಲ್ಲಿ ಒಂದು. ವೇದ ಋಷಿಗಳಿಗೆ ಸೂರ್ಯ ಮತ್ತು ಅಗ್ನಿಗಳು ಪ್ರತ್ಯಕ್ಷ ದೇವತೆಗಳೇ. ಉಳಿದ ಇಂದ್ರ ಯಮ ವರುಣಾದಿಗಳು ಗೋಚರಗಳೇ ಅಲ್ಲ. ಅಂತೆಯೇ ಪುರಾಣಗಳ ಕಾಲಕ್ಕೆ ಸೂರ್ಯ ವಿಭೂತಿರೂಪ ಹೊಂದಿ ಅವನಿಗೊಂದು ಮಾನವಕಲ್ಪಿತ ವಿಲಕ್ಷಣ ಶರೀರ, ಹೆಂಡಿರು–ಮಕ್ಕಳು–ಪರಿವಾರದವರೇ ಮೊದಲಾದವರ ಸೃಷ್ಟಿಯೇ ಆಗಿ ಹೋಯಿತು. ಅನೇಕ ದೇವಾಲಯಗಳೂ ನಿರ್ಮಾಣಗೊಂಡವು. ಈಗ ಪಾಕಿಸ್ಥಾನದಲ್ಲಿ ಸೇರುವೆಗೊಂಡಿರುವ ಮುಲ್ತಾನಿನಲ್ಲಿ ಅತ್ಯಂತ ಪ್ರಾಚೀನ ಸೂರ್ಯದೇವಾಲಯವಿತ್ತು. ಆ ನಗರದ ಹೆಸರು 'ಮೂಲಸ್ಥಾನ' ಎಂದು. ಕಾಶ್ಮೀರದ ಶ್ರೀನಗರದ ಬಳಿಯಲ್ಲಿ ಏಳನೆಯ ಶತಮಾನದಲ್ಲಿ ಸ್ಥಾಪಿಸಲ್ಪಟ್ಟ ಸೂರ್ಯದೇವಾಲಯವಿತ್ತು. ಈ ಎರಡೂ ದೇವಾಲಯಗಳು ಪರಕೀಯರ ದಾಳಿಗೆ ತುತ್ತಾಗಿ ನಾಶವಾದವು. ಓರಿಸ್ಸಾದ ಪುರಿ ಜಿಲ್ಲೆಯಲ್ಲಿನ ಕೋಣಾರ್ಕ ದೇವಾಲಯವೇ ಇಂದಿಗೂ ತನ್ನ ಜಗತ್ಪ್ರಸಿದ್ಧತೆಯನ್ನು ಉಳಿಸಿಕೊಂಡು ಬಂದು ರಾರಾಜಿಸುವ ಸೂರ್ಯದೇವಾಲಯವಾಗಿದೆ. ದಕ್ಷಿಣ ಭಾರತದಲ್ಲಿ ಉತ್ತಮ ಕಲಾಕೃತಿಯ ಕ್ಕ ದೇವಾಲಯ ತಂಜಾವೂರು ಜಿಲ್ಲೆಯ



'ಆಡುದುರೈ' ಎಂಬಲ್ಲಿದೆ. ಈ ಎರಡೂ ದೇವಾಲಯಗಳು ೧೨ನೆಯ ಶತಮಾನದಿಂದ ಈಚಿನವು.

ಸೂರ್ಯಾರಾಧನೆ ಕೇವಲ ಹಿಂದೂ ಸಂಸ್ಕೃತಿಯ ವೈಶಿಷ್ಟ್ಯವೆಂದೇನೂ ಅಲ್ಲ. ಪ್ರಾಚೀನ ಜಗತ್ತಿನ ಅನೇಕ ಜನಾಂಗಗಳು ಸೂರ್ಯಾರಾಧನೆಯನ್ನು ಮಾಡುತ್ತ ಬಂದಿವೆ. ಮೆಕ್ಸಿಕೋ, ಜಪಾನ್, ಪರ್ಷಿಯಾ ಕೊಲ್ಲಿಯ ದೇಶಗಳಲ್ಲಿನ ಜನಾಂಗದಲ್ಲಿ ಸೂರ್ಯಾರಾಧನೆ ಇತ್ತು. ಯಹೂದಿಗಳಲ್ಲಿ ಸೂರ್ಯಾರಾಧನೆ ವ್ಯಾಪಕವಾಗಿತ್ತು. ಕೋಪರ್ನಿಕಸನ ಬರಹಣಿಗೆಗಳಲ್ಲಿ ನಮ್ಮ ಪುರಾಣಗಳಲ್ಲಿ ವರ್ಣಿತವಾದ ರೀತಿಯಲ್ಲಿಯೇ ವರ್ಣಿಸಿರುವ ಅನೇಕ ವರ್ಣನೆಗಳು ಬರುತ್ತವೆ.

**ಮೂಲಮಂತ್ರವೊಂದೇ :**

ಹಿಂದೂ ಜನಾಂಗದಲ್ಲಿ ಆಸೇತು ಹಿಮಾಲಯದವರೆಗೆ ಮಕರ ಸಂಕ್ರಮಣದ ಆಚರಣೆಯಲ್ಲಿ ಅಲ್ಪಸ್ವಲ್ಪ ಭಿನ್ನತೆ ಕಂಡುಬಂದರೂ ಮೂಲಮಂತ್ರವೊಂದೇ. ಇದೊಂದು ಸೂರ್ಯಚಲನೆಯ ಪರ್ವಕಾಲದಲ್ಲಿ ಉಂಟಾಗುವ ಋತುಬದಲಾವಣೆಯ ಹಬ್ಬ. ಸಾಮಾನ್ಯವಾಗಿ ಪುಷ್ಯಮಾಸದಲ್ಲಿ ಜನವರಿ ೧೩ ಮತ್ತು ೧೪ನೆಯ ತಾರೀಖುಗಳಲ್ಲಿ ಈ ಹಬ್ಬ ಬರುತ್ತದೆ. ಕೆಲವು ಕಡೆ ಮೂರು ದಿನಗಳು ವಿಜೃಂಭಣೆಯಿಂದ ಈ ಹಬ್ಬವನ್ನು ಆಚರಿಸಿದರೆ, ಕರ್ನಾಟಕದಲ್ಲಿ ಒಂದು ದಿನ ಮಾತ್ರ ಈ ಹಬ್ಬವನ್ನು ಆಚರಿಸುವುದು ಪದ್ಧತಿ. ಕೆಲವರು ಸಂಕ್ರಮಣದ ಪುಣ್ಯಕಾಲದಲ್ಲಿ ತೀರ್ಥಾದಿಗಳಿಗೆ, ನದಿ, ಸರೋವರ, ಸಂಗಮಸ್ಥಾನಗಳಿಗೆ ಹೋಗಿ ಸ್ನಾನಾದಿಗಳನ್ನು ಮುಗಿಸಿ ತಮ್ಮ ಪಿತೃಗಳಿಗೆ ತಿಲತರ್ಪಣ ಕೊಡುವುದುಂಟು. ತಮ್ಮ ತಮ್ಮ ಪೂರ್ವಜರನ್ನು ಕೃತಜ್ಞತೆಯಿಂದ ಸ್ಮರಿಸಿಕೊಳ್ಳಲು ನಮ್ಮ ಸಂಸ್ಕೃತಿ ಕಲ್ಪಿಸಿರುವ ಒಂದು ಸಂದರ್ಭವೆಂದು ಈ ವಿಷಯದಲ್ಲಿ ಹೇಳಬಹುದು. ಎಳ್ಳು-ಬೆಲ್ಲಗಳನ್ನು ಬೆರೆಸಿ ಪರಸ್ಪರ ಕೊಳುಕೊಡೆಯನ್ನಾಚರಿಸಿ ಸ್ನೇಹಸೌಹಾರ್ದಗಳನ್ನು ನವೀಕರಿಸಿಕೊಳ್ಳುವ ಒಂದು ಸಡಗರ ಈ ಹಬ್ಬದಲ್ಲಿ ಎದ್ದು ಕಾಣುವ ಇನ್ನೊಂದು ವೈಶಿಷ್ಟ್ಯ. ಕೆಲವೆಡೆ ದನಕರುಗಳನ್ನು ಕಿಚ್ಚು ಹಾಯಿಸುವ ಪದ್ಧತಿಯನ್ನು ಆಚರಿಸುವುದುಂಟು.

ಸಂಕ್ರಾಂತಿಯ ಮರುದಿನ ಬಂಧುಬಾಂಧವರು ಆಪ್ತೇಷ್ಟರು ಒಬ್ಬರ ಮನೆಗೊಬ್ಬರು ಹೋಗಿ ಎಳ್ಳು, ಬೆಲ್ಲ, ಕಬ್ಬು, ಎಲಚಿಹಣ್ಣೇ ಮೊದಲಾದುವನ್ನು ಪರಸ್ಪರ ಕೊಳುಕೊಡೆಯನ್ನಾಚರಿಸಿ ತಮ್ಮ ಬಾಂಧವ್ಯದ ಬದುಕನ್ನು ಸಿಹಿಗೊಳಿಸಿಕೊಳ್ಳುತ್ತಾರೆ.

ಒಟ್ಟಿನಲ್ಲಿ ಸಂಕ್ರಾಂತಿ ಕೇವಲ ಒಂದು ಸಂಪ್ರದಾಯದ ಹಬ್ಬವಾಗಿರದೆ, ಸ್ನೇಹ ಸಂಬಂಧವರ್ಧನೆ, ಪೂರ್ವಜರ ಸ್ಮರಣೆ, ಸ್ವರ್ಗಮರ್ತ್ಯಗಳ ಸಂಬಂಧಕಲ್ಪನೆ, ಪ್ರಕೃತಿಯೊಡನೆ ಸ್ವರಮೇಳಗೊಳ್ಳುವಿಕೆ, ಆಹಾರಬದಲಾವಣೆ, ಆಮೋದ ಪ್ರಮೋದ, ಆಚಾರವಿಚಾರಗಳ ಪವಿತ್ರ್ಯತೆಯನ್ನು ಜನಾಂಗದಲ್ಲಿ ಕುದುರಿಸಲು ಹಿಂದೂ ಸಂಸ್ಕೃತಿ ಕಲ್ಪಿಸಿರುವ ಬಹು ಪ್ರಾಚೀನಕಾಲದ ಹಬ್ಬ. ಈ ಹಬ್ಬದ ಮುಖ್ಯ ದೇವತೆ ಸೂರ್ಯ. ಈ ವರ್ಷದ ಮಕರ ಸಂಕ್ರಮಣ ಸರ್ವರಿಗೂ ಸುಖಸಂತೋಷಗಳನ್ನುಂಟುಮಾಡಲಿ.

# ೧೯೧೦ ರ ಒಂದು ಸಂಭಾಷಣೆ

ಎಂ. ಜಿ. ವೆಂಕಟೇಶಯ್ಯ, ಚಾಮರಾಜಪೇಟೆ ಬೆಂಗಳೂರು-18,

ನಾಟಕವನ್ನು ನೋಡುವುದಕ್ಕೆ ಹೋಗುವುದೂ, ದೇವದಾಸಿಯರ ಮನೆಗೆ ಊಟಕ್ಕೆ ಹೋಗುವುದೂ ಒಂದೇ ಎಂದು ಶೇಷಶಾಸ್ತ್ರಿಗಳ ಮತ. ಅತನ ಮಿತ್ರ ವಿಶ್ವನಾಥ ಇದರ ವಿಚಾರ ಅವರ ಮಾತುಕತೆ ಇವತ್ತಿಗೂ ನನಗೆ ನೆನಪಿದೆ.

ಶೇಷ : ನೋಡೋದಕ್ಕೆ ಹೋಗಬಾರದು ನಿಷಿದ್ಧ !

ವಿಶ್ವ : ನೋಡೋದು ಬೇಡ-ಪಾರ್ಟು ಮಾಡಿದರೆ ಹೇಗೆ ?

ಶೇಷ : ಅಯ್ಯೋ ರಾಮ ! ಏನು ಕಾಲ ಬಂತಪ್ಪ ! ಪಾರ್ಟು ಮಾಡೋದು ಪೋಲಿ ಪೋಕರಿಗಳ ಕೆಲಸ !!

ವಿಶ್ವ : ನಾಟಕ ಬರೆದ ಕವಿಗಳು ದೊಡ್ಡವರು. ಶೇಷ : ಇರಬಹುದು

ವಿಶ್ವ : ಅದೊಂದು ದೊಡ್ಡ ಕಲೆ. ಶೇಷ : ಇರಬಹುದು

ವಿಶ್ವ : ನಟನೆಗೆ ಪ್ರತಿಭೆ ಬೇಕು, ಅಲ್ಲವೆ ?

ಶೇಷ : ಪ್ರತಿಭೆ ಅಲ್ಲ ! ಪ್ರತಿಮೆ !! ಹುಚ್ಚು ಹುಚ್ಚು !!

ವಿಶ್ವ : ಎಲ್ಲಿ ಪ್ರತಿಭೆಯಿದೆಯೋ ಅಲ್ಲಿ ಮಹಾದೇವನಿದ್ದಾನೆ ಹಾಗಂತಲೆ ಆ ಪ್ರತಿಭೆಯನ್ನು ಬೆಳೆಸಬೇಕೆಂದೇ ನಾವು ಬೆಂಗಳೂರು ಯೂನಿಯನ್ ಪ್ರಾರಂಭ ಮಾಡಿದ್ದು

ಶೇಷ : ತಿಕ್ಕಲು ಎಂದೆ, ಸೂಳೆ ಆಡಿಸಿದ ಹಾಗೆ ಕೈಕಾಲಾಡಿಸೋದು-ಪ್ರತಿಭೆ ! ಪ್ರತಿಭೆ ! ಎಂಬೋದು ಏನಿದೆ ಅದರಲ್ಲಿ. ಗಂಡಸು ಸೀರೆ ಉಟ್ಟದ್ದನ್ನು ನೋಡಿದರೆ ಪಾಪ ಬರುತ್ತೆ

ವಿಶ್ವ : ಹಾಗಾದರೆ ಹೆಂಗಸರನ್ನೇ ರಂಗಸ್ಥಳಕ್ಕೆ ಹರ್ಪಿಸಿದರಾಯ್ತು !

ಶೇಷ : ಏನೋ ರಾಮ ಕೃಷ್ಣ ! ಅಂತ ಇದ್ದೇವೆ. ಮನೇ ಹೆಂಗಸರನ್ನು ಬೀದೀ ಪಾಲು ಮಾಡೋಕೆ ಹುಟ್ಟದ್ದೀರಲ್ಲಪ್ಪ ! ಖಂಡಿತ ನಿಮ್ಮಿಂದ ನಮ್ಮ ಕುಲಗಳೇ ನಾಶವಾಗಿ ಬಿಡುತ್ತೆ !

ವಿಶ್ವ : ಅಲ್ಲ, ಶಾಸ್ತ್ರಿಗಳೇ ! ದೊಡ್ಡೋರು ನೋಡೋದು ಬೇಡ ಪಾಪ, ಆರು ಏಳು ವರ್ಷದ ಮಕ್ಕಳು ನೋಡಿದರೇನು ?

ಶೇಷ : ಮುಂಜಿಯಾಗುವವರೆಗೂ ಅದು ಕೂಸು, ಆ ಕೂಸು ತನ್ನ ತಾಯಿಯ ಜೊತೆಯಲ್ಲಿ ನಾಟಕ ನೋಡಲಿ, ಪರವಾಯಿಲ್ಲ !

ವಿಶ್ವ : ಮುಂಜಿಯಾಗದೇ ಇದ್ದವರು ? ಶೇಷ : ಹೋಗಬಹುದಪ್ಪ !

ವಿಶ್ವ : ಮುಂಜಿಯಾದ ಮೇಲೆ ?

ಶೇಷ : ಅವರು ಹೋಗಲೇಕೂಡದು. ಬ್ರಹ್ಮಚಾರಿಗಳು, ನಾಟಕ, ಸಂಗೀತ, ನಾಟ್ಯ, ನೋಡಬಾರದು. ಇದು ವೇದ ಮತ.

ವಿಶ್ವ : ಅಷ್ಟು ಕಟ್ಟುನಿಟ್ಟಾ.



## ಮಾನ್ಯ ಸದಸ್ಯರುಗಳಿಗೆ

ಜಾಹೀರಾತುದಾರರಿಗೆ

ಆಜೀವ ಸದಸ್ಯರ ಬಳಗಕ್ಕೆ ಮತ್ತು ಪತ್ರಿಕೆಯ ಪುರೋಭಿವೃದ್ಧಿಗಾಗಿ ಸತತವಾಗಿ ಶ್ರಮಿಸುತ್ತಿರುವ ಅಭಿಮಾನಿಗಳಿಗೆ,

ಸಂಕ್ರಾಂತಿಯ ಶುಭಾಶಯಗಳು

ಪ್ರಕಾಶಕರು

ಮಾಡುವಂತಿರಬೇಕು, ಮಾಡದಂತಿರಬೇಕು
ಮಾಡುವ ಮಾಟದಲ್ಲಿ ತಾನಿಲ್ಲದಂತಿರಬೇಕು.

—ಬಸವಣ್ಣ

ಹೊತ್ತು ಹೊತ್ತಿಗೆ ಎಚ್ಚರವನು ಪಾಲಿಸಿ
ಮನಕೆ ಕರ್ತುವಾಗಿ ತಾವು ನಿಂದುಕೊಂಡು
ರಕ್ಷಣೆಯ ಮಾಡುವ ಗುರುವಿರುತಿರಲು
ಮನ ಮತ್ತೊಂದನೆಣಿಸುವದೆ ಕೇಳೆಲ ಮರುಳೆ ॥

—ಲಿಂಗಮ್ಮ

## ಮಾನ್ಯ ಓದುಗರಲ್ಲಿ ವಿನಂತಿ

1983 ನೇ ಹೊಸ ವರ್ಷಕ್ಕೆ ನಿಮ್ಮ ಚಂದಾ ನಂಬರ್ ಗುರುತಿಸಿಕೊಳ್ಳಿ.

ವಿಳಾಸ ಬದಲಾವಣೆಗೆ ಚಂದಾ ನಂಬರ್ ಸೂಚಿಸಿ ನಮ್ಮೊಡನೆ ವ್ಯವಹರಿಸಿ.

ಪ್ರಕಾಶಕರು,
ಸಿದ್ಧಗಂಗಾ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ.

LICENCED TO POST WITHOUT PRE PAYMENT LICENCE NO. 3
SIDDAGANGA Monthly Reg No. KRN Q-9

|| ಓಂ ||

# ವ್ಯವಸಾಯ ಮತ್ತು ಕೈಗಾರಿಕಾ ವಸ್ತು ಪ್ರದರ್ಶನ 1983

## ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ.

** ಈ ವರ್ಷ ವಸ್ತು ಪ್ರದರ್ಶನವು ಮಹಾಶಿವರಾತ್ರಿ ಜಾತ್ರೆಯ ಅಂಗವಾಗಿ ಶ್ರೀ ಸಿದ್ಧಗಂಗಾ ಮಠದ ಹಳೆಯ ವಿದ್ಯಾರ್ಥಿ ಸಂಘದ ವತಿಯಿಂದ ಫೆಬ್ರವರಿ 2ನೇ ತಾರೀಖಿನಿಂದ ಪ್ರಾರಂಭವಾಗಲಿದೆ.

** ಕೇಂದ್ರ ಮತ್ತು ರಾಜ್ಯ ಸರ್ಕಾರದ ಇಲಾಖೆಗಳು, ಖಾಸಗಿ ಸಂಘ ಸಂಸ್ಥೆಗಳು ಮತ್ತು ಇತರ ಉದ್ದಿಮೆಗಳು ಹಾಗೂ ಗ್ರಾಮ ಕೈಗಾರಿಕೆಗಳು ಭಾಗವಹಿಸಿದ್ದು ನಗರ ಜನರಿಗಲ್ಲದೆ ಲಕ್ಷಾಂತರ ರೈತಾಪಿ ಜನರಿಗೆ ಈ ವಸ್ತುಪ್ರದರ್ಶನವು ಮಾರ್ಗದರ್ಶನವಾಗಿದೆ.

** ಈಗಾಗಲೇ ಕಳೆದ 19 ವರ್ಷಗಳಿಂದ ಕೋಟ್ಯಾಂತರ ಜನರನ್ನು ಈ ವಸ್ತುಪ್ರದರ್ಶನವು ಆಕರ್ಷಿಸಿರುತ್ತದೆ.

** ಫೆಬ್ರವರಿ 2ರಿಂದ ಪ್ರಾರಂಭವಾಗಲಿರುವ ನಮ್ಮ ವಸ್ತು ಪ್ರದರ್ಶನವು ಫೆಬ್ರವರಿ 16 ರವರೆಗೆ ನಡೆಯಲಿದ್ದು ಪ್ರತಿದಿನ ಸಂಜೆ ವಸ್ತು ಪ್ರದರ್ಶನದಲ್ಲಿ ನೃತ್ಯ, ಸಂಗೀತ, ನಾಟಕ ಮೊದಲಾದ ಸಾಂಸ್ಕೃತಿಕ ಮತ್ತು ಮನರಂಜನಾ ಕಾರ್ಯಕ್ರಮಗಳು ಹಾಗೂ ಉಪಯುಕ್ತ ವಿಷಯಗಳ ಚಲನಚಿತ್ರ ಪ್ರದರ್ಶನಗಳನ್ನು ಏರ್ಪಡಿಸಲಾಗಿದೆ. ಕಾರ್ಯಕ್ರಮಗಳನ್ನು ಕೊಡಲಿಚ್ಛಿಸುವವರು ಸಮಿತಿಯವರನ್ನು ಸಂಪರ್ಕಿಸಬೇಕಾಗಿ ಕೋರಿದೆ.

** ಮತ್ತೊಂದು ವಿಷಯವೆಂದರೆ ಈ ವರ್ಷ ಜಾತ್ರೆಯೂ ಕೂಡ ಶ್ರೀ ...ವರಾತ್ರಿಗಿಂತ ಒಂದು ವಾರ ಮುಂಚಿತವಾಗಿ ಪ್ರಾರಂಭವಾಗಲಿ... ಮಳಿಗೆಗಳನ್ನು ಕಾಯ್ದಿರಿಸುವವರಿಗೆ ಸದವಕಾಶ. ವ್ಯಾಪಾರಸ್ಥರು ಹೆಚ್ಚುಹೆಚ್ಚಾಗಿ ಬಂದು ಇದರ ಉಪಯೋಗವನ್ನು ಪಡೆಯಬೇಕಾಗಿ ವಿನಂತಿ.

ವಸ್ತು ಪ್ರದರ್ಶನ ಸಮಿತಿ
ಶ್ರೀ ಸಿದ್ಧಗಂಗಾ ಮಠ

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ. ಶ್ರೀ ಸಿದ್ಧಗಂಗಾ ಕ್ಷೇತ್ರ.